ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

**ಚಂದಾದರ ವಿವರ**

| | | |
|---|---|---|
| **ದೇಶ** | | |
| ವಾರ್ಷಿಕ | ₹ | 200-00 |
| ಅರ್ಧ ವಾರ್ಷಿಕ | ₹ | 100-00 |
| ಬಿಡಿ ಪ್ರತಿ | ₹ | 10-00 |
| **ಗಲ್ಫ್ ರಾಷ್ಟ್ರಗಳಿಗೆ** | | |
| ವಾರ್ಷಿಕ | ₹ | 1,500-00 |
| ಅರ್ಧ ವಾರ್ಷಿಕ | ₹ | 750-00 |

❖ ಸಂಪುಟ: 18 ❖ ಸಂಚಿಕೆ: 2 ❖ ಪುಟ: 12 ❖ ಜನವರಿ 16-31, 2014 ❖ ಬೆಲೆ: 10/- http://www.salafimangalore.org

## ಸರ್ವ ಧರ್ಮ ಗ್ರಂಥಗಳು ಸಾರಿದ ಏಕದೇವಾರಾಧನಾ ತತ್ವದೆಡೆಗೆ ಮನುಷ್ಯ ಮನಸ್ಸುಗಳು ಮರಳಲಿ

**ಸಂಪಾದಕೀಯ**

ಮಾನವರು ಕೊನೆಯಿಲ್ಲದ ಬಯಕೆಗಳಿರುವವರಾಗಿದ್ದಾರೆ. ತಮ್ಮ ಬಯಕೆಗಳ ಈಡೇರಿಕೆಗಾಗಿ ಜನರು ತೀವ್ರ ಪರಿಶ್ರಮ ನಡೆಸುತ್ತಿದ್ದಾರೆ. ಒಂದು ಬಯಕೆ ಈಡೇರಿದರೆ ಇನ್ನೊಂದು ಬಯಕೆ ಮೂಡಿ ಬರುತ್ತದೆ. ಈ ಬಯಕೆಗಳ ಮಧ್ಯೆ ಒಂದು ದಿನ ನಾವು ಈ ಲೋಕಕ್ಕೆ ವಿದಾಯ ಹೇಳುತ್ತೇವೆ. ಅದುವೇ ಮರಣ! ಅದು ಮಾನವ ಜೀವನದ ಅನಿವಾರ್ಯ ಅಂತ್ಯವಾಗಿದೆ. ಮರಣವನ್ನು ಎದುರಿಸಲು ಮಾನವನು ಬಹಳಷ್ಟು ಪ್ರಯತ್ನ ಪಡುತ್ತಾನೆ. ಆದರೆ ಮರಣವನ್ನೆದುರಿಸಲು ಮಾನವನಿಗೆ ಸಾಧ್ಯವಿಲ್ಲ. ತನ್ನ ಬಯಕೆಗಳನ್ನು ಈಡೇರಿಸಲಿಕ್ಕಾಗಿ ನಡೆಸುವ ಪರಿಶ್ರಮದ ಬೆವರ ಹನಿಗಳನ್ನು ಹಣೆಯಲ್ಲಿ ಹೊತ್ತುಕೊಂಡೇ ಮಾನವನು ಮರಣವನ್ನು ತಬ್ಬಿಕೊಳ್ಳುತ್ತಾನೆ. ತಮ್ಮ ಆಯುಸ್ಸಿನೆಡೆಯಲ್ಲಿ ತಮ್ಮೆಲ್ಲಾ ಬಯಕೆಗಳನ್ನು ಪೂರ್ತೀಕರಿಸಲು ಸಾಧ್ಯವಿಲ್ಲವೆಂದರಿತ ಮನುಷ್ಯ ಮನಸ್ಸುಗಳು ಇನ್ನೊಂದು ಲೋಕದ ಅವಶ್ಯಕತೆಯನ್ನು ಬಯಸುವುದು ಸ್ವಾಭಾವಿಕವಾಗಿದೆ.

ಶಾಶ್ವತತೆಯ ಬಯಕೆಯು ಮಾನವನ ಅಸ್ತಿತ್ವದ ಸ್ವಾಭಾವಿಕವಾದ ಬೇಡಿಕೆಗಳಲ್ಲೊಂದಾಗಿದೆ. ಮಾನವನು ಪ್ರಪಂಚದ ಶ್ರೇಷ್ಟ ಸೃಷ್ಟಿಯಾಗಿದ್ದಾನೆ. ಮಾನವ ಸೃಷ್ಟಿ ಪ್ರತ್ಯಕ್ಷವಾಗುವುದಕ್ಕಿಂತ ಮೊದಲೇ ಈ ಪ್ರಪಂಚವಿದೆ. ಮಾನವನು ಮರಣ ಹೊಂದಿದ ಮೇಲೂ ಈ ಪ್ರಪಂಚ ಹೀಗೆಯೇ ಇರುತ್ತದೆ. ಒಳಿತನ್ನು ಮಾಡಬೇಕೆಂಬುದು ಮಾನವನ ಸಹಜ ಗುಣವಾಗಿದೆ. ಅವನು ಕೆಡುಕನ್ನು ದ್ವೇಷಿಸುತ್ತಾನೆ. ಆದರೆ ಒಳಿತು ಕೆಡುಕುಗಳನ್ನು ತೀರ್ಮಾನಿಸಲು ಮಾನವನಿಗೆ ಸಾಧ್ಯವಿಲ್ಲ. ಒಬ್ಬನಿಗೆ ಒಳಿತಾಗಿ ಕಂಡದ್ದು ಇನ್ನೊಬ್ಬನಿಗೆ ಕೆಡಕಾಗಿ ಕಾಣಬಹುದು. ತದ್ವಿರುದ್ಧವಾಗಿಯೂ ಸಂಭವಿಸಬಹುದು. ಒಳಿತು ಕೆಡುಕುಗಳಿಗೆ ತಕ್ಕ ಪ್ರತಿಫಲ ನೀಡಲು ಈ ಲೋಕದಲ್ಲಿ ಸಾಧ್ಯವಿಲ್ಲ ಎಂಬುದು ಒಂದು ವಾಸ್ತವವಾಗಿದೆ. ಸಮಾಜಕ್ಕೆ ಒಳಿತನ್ನು ಮಾತ್ರ ಮಾಡುತ್ತ ಜೀವಿಸಿದವರಿಗೆ ತಕ್ಕುದಾಗ ಪ್ರತಿಫಲ ಇಲ್ಲಿ ಸಿಕ್ಕಿದೆಯೇ? ಇಡೀ ಸಮಾಜವನ್ನೇ ದುರಂತಕ್ಕೀಡು ಮಾಡುವ ಸಮಾಜ ಕಂಠಕರಿಗೆ ತಕ್ಕ ಶಿಕ್ಷೆ ಇಲ್ಲಿ ಸಿಗುತ್ತಿದೆಯೇ? ಸಿಗುವುದಿಲ್ಲವೆಂದಾದರೆ ಮಾನವನು ಯಾಕಾಗಿ ಒಳಿತನ್ನು ಮಾಡಬೇಕು. ಯಾಕಾಗಿ ಕೆಡುಕನ್ನು ತ್ಯಜಿಸಬೇಕು? ಚಿಂತಿಸಿ ನೋಡಿರಿ. ಈ ಲೋಕದ ಯಾವುದೇ ವ್ಯವಸ್ಥೆಯು ಅದಕ್ಕೆ ಸೂಕ್ತವಲ್ಲದಿರುವುದರಿಂದ ಅದಕ್ಕೆಲ್ಲಾ ಸಾಧ್ಯವಾಗುವ ಒಂದು ವೇದಿಕೆಯ ಅಗತ್ಯವಿದೆಯೆಂದು ಮನುಷ್ಯ ಬುದ್ಧಿಯ ಅಪೇಕ್ಷೆಯಾಗಿದೆ. ಅದುವೇ ಪರಲೋಕ.

ಅನಶ್ವರವಾದ ಮರಣಾನಂತರ ಜೀವನದ ಸುಖ ಸಂತೃಪ್ತಿಯೇ ನಿಜವಾದ ಸುಖ. ಆದ್ದರಿಂದಲೇ ಮಾನವನ ಇಹಲೋಕ ಜೀವನದ ಗುರಿ ಮರಣಾನಂತರ ಜೀವನದ ಮೋಕ್ಷವಾಗಿರಬೇಕು. ಐಹಿಕ ಜೀವನದಲ್ಲಿ ಸ್ವಲ್ಪ ತ್ಯಾಗ ಸಹಿಸಿದರೂ ಮರಣಾ ನಂತರ ಜೀವನದಲ್ಲಿ ಸುಖ ಸಿಗಬೇಕೆಂಬ ರೀತಿಯಲ್ಲಿ ಮಾನವರು ಬದುಕನ್ನು ರೂಪಿಸಬೇಕು. ಮರಣದ ಕುರಿತು ಸರಿಯಾದ ವಿವರಣೆ ನೀಡಲು ಸಾಧ್ಯವಾಗದ ಮಾನವನಿಗೆ ಮರಣಾನಂತರ ಜೀವನದ ವಾಸ್ತವವನ್ನು ತನ್ನ ಬುದ್ಧಿಯಿಂದ ಕಂಡುಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಆ ಜೀವನದ ಕುರಿತೇನಾದರೂ ಅರಿವು ನೀಡುವ ವಿಷಯಗಳಿವೆಯೇ ಎಂದು ಚಿಂತಿಸಬೇಕಾದುದು ಮಾನವನ ಬಾಧ್ಯತೆಯಾಗಿದೆ. ಈ ಬಾಧ್ಯತೆಯನ್ನು ನಿರ್ವಹಿಸದಿದ್ದರೆ ಶಾಶ್ವತ ನಷ್ಟಕ್ಕೆ ಕಾರಣವಾದೀತು ಎಂಬುದರಲ್ಲಿ ಸಂಶಯವಿಲ್ಲ.

### ಧರ್ಮಗಳು ಮತ್ತು ಮರಣಾನಂತರ ಜೀವನ

ಮರಣಾನಂತರ ಜೀವನದಲ್ಲಿರುವ ವಿಶ್ವಾಸವು ಎಲ್ಲಾ ಧರ್ಮಗಳ ಸಾಮಾನ್ಯ ತತ್ವಗಳಲ್ಲಿ ಒಂದಾಗಿದೆಯೆಂಬುದನ್ನು ಕಾಣಬಹುದಾಗಿದೆ. ಎಲ್ಲಾ ಧರ್ಮಗಳ ಪರಲೋಕ ವಿಶ್ವಾಸ ಒಂದೇ ರೀತಿಯಾಗಿತ್ತು. ಬಳಿಕ ಅದರಲ್ಲಿ ವ್ಯತ್ಯಾಸವುಂಟಾಯಿತು ಎಂದು ಅಧ್ಯಯನಗಳು ಸ್ಪಷ್ಟಪಡಿಸುತ್ತವೆ.

ವೇದ ಪಂಡಿತರಾದ ರಾಹು ಸಾಂಕೃತಾಯನ್ ಎಂಬವರು ಹೀಗೆ ಬರೆಯುತ್ತಾರೆ. 'ವೇದದ ಋಷಿಗಳು ಈ ಲೋಕಕ್ಕಿಂತ ವಿಭಿನ್ನವಾದ ಒಂದು ಲೋಕವಿದೆಯೆಂದು ನಂಬಿದ್ದರು. ಸತ್ಕರ್ಮಿಗಳು ಮರಣಾನಂತರ ಅಲ್ಲಿಗೆ ಹೋಗಲಿದ್ದಾರೆ. ಅಲ್ಲಿ ಅವರು ಸಂತೋಷಭರಿತರಾಗಿ ಜೀವಿಸಲಿದ್ದಾರೆ. ಕೆಳಗಿರುವ ಪಾತಾಳವು ಅಂಧಕಾರದ ನರಕವಾಗಿದೆ. ದುಷ್ಕರ್ಮಿಗಳು ಅಲ್ಲಿಗೆ ಹೋಗಲಿದ್ದಾರೆ." (ರಾಹುಲ್ ಸಾಂಕೃತಾಯನ್, ವಿಶ್ವದರ್ಶನಗಳು: ಪುಟ 552) ಇದಕ್ಕೆ ವಿರುದ್ಧವಾದ ಪುನರ್ಜನ್ಮ ವಿಶ್ವಾಸವು ಪ್ರಾರಂಭಗೊಂಡದ್ದು ವರ್ಣಾಶ್ರಮ ವ್ಯವಸ್ಥೆಯ ಮೂಲಕವಾಗಿದೆ.

ಯೇಸು ಕ್ರಿಸ್ತರ ಉಪದೇಶವನ್ನು ಗಮನಿಸಿರಿ: "ನೀನು ಪಾಪ ಕೃತ್ಯವೆಸಗಲು ನಿನ್ನ ಕೈ ಕಾರಣವಾಗುವುದಾದರೆ ಅದನ್ನು ಕಡಿದು ಬಿಡು. ಎರಡು ಕೈಗಳ ಸಹಿತ (2ನೇ ಪುಟಕ್ಕೆ)




## ಪ್ರಾರ್ಥನೆ, ಸಹಾಯಾರ್ಥನೆ ಸೃಷ್ಟಿಕರ್ತನೊಂದಿಗೆ ಮಾತ್ರವಾಗಿರಬೇಕು

"ನಿಮ್ಮಲ್ಲಿ ಅನುಗ್ರಹವಾಗಿ ಏನಿದೆಯೋ ಅವೆಲ್ಲಾ ಅಲ್ಲಾಹನಿಂದಲೇ ಆಗಿರುತ್ತದೆ. ಮಾತ್ರವಲ್ಲ, (ಅದರ ಹೊರತಾಗಿ) ನಿಮಗೆ ಹಾನಿ(ಯೇನಾದರೂ) ತಟ್ಟಿದರೆ ನೀವು ಗೋಳಿಡುತ್ತಾ ಅವನ ಕಡೆಗೇ ಮೊರೆ ಹೋಗುತ್ತೀರಿ. ಬಳಿಕ ಅವನು ನಿಮ್ಮಿಂದ (ಆ) ತೊಂದರೆಯನ್ನು ನೀಗಿಸಿದರೆ ಆಗ (ಅದೋ) ನಿಮ್ಮ ಪೈಕಿ ಒಂದು ವಿಭಾಗದವರು ತಮ್ಮ ಪ್ರಭುವಿನೊಂದಿಗೆ (ಬೇರೆ ಕೆಲವರನ್ನು) ಭಾಗೀದಾರರಾಗಿ ಮಾಡುತ್ತಾರೆ". (ಕುರ್‌ಆನ್ 16:53, 54)

ಹಡಗು ಮುಳುಗಲನುವಾಗುವಂತಹ ಕೆಲವು ಅಪಾಯದ ಸಂದರ್ಭಗಳಲ್ಲಿ ಅಲ್ಲಾಹನೊಡನೆ ನಿಷ್ಕಳಂಕವಾಗಿ ಪ್ರಾರ್ಥಿಸುವವರು ಬಹುದೇವ ವಿಶ್ವಾಸಿಗಳಲ್ಲಿದ್ದರು. ಅಲ್ಲಾಹು ಆ ಪ್ರಾರ್ಥನೆಯನ್ನು ಸ್ವೀಕರಿಸಿ ಅವರನ್ನು ರಕ್ಷಿಸಿ ದಡಕ್ಕೆ ತಂದರೆ ಅವರು ಅಲ್ಲಾಹನೊಂದಿಗೆ ಭಾಗೀದಾರರನ್ನು ಸೇರಿಸುತ್ತಿದ್ದರು. ವಿಶುದ್ಧ ಕುರ್‌ಆನಿನ 29:65ರಲ್ಲಿ ಅದನ್ನು ಕಾಣಬಹುದು. ಅಪಾಯದಿಂದ ರಕ್ಷಿಸಲು ಅಲ್ಲಾಹನೊಡನೆ ಪ್ರಾರ್ಥಿಸಿದವರು ರಕ್ಷಣೆ ಹೊಂದಿದ ಬಳಿಕ ಕೃತಜ್ಞತೆ ಸಲ್ಲಿಸುವುದು ಬೇರೆ ದೇವರಿಗೆ ಎಂದರ್ಥ. ಇದರೊಂದಿಗೆ ಸಾಮ್ಯತೆಯಿರುವ ವಿಷಯವಾಗಿದೆ ಮೇಲಿನ ಸೂಕ್ತಗಳಲ್ಲಿ ಪ್ರಸ್ತಾಪಿಸಿದ್ದು.

ಅಲ್ಲಾಹನೊಡನೆ ಪ್ರಾರ್ಥಿಸುವುದಕ್ಕಿಂತಲೂ ಹೆಚ್ಚು ಅವನ ಸೃಷ್ಟಿಗಳೊಡನೆ ಪ್ರಾರ್ಥಿಸುವವರಿದ್ದಾರೆ. ಆದರೆ ತಮ್ಮ ಬಳಿಯಿರುವ ಅನುಗ್ರಹಗಳಲ್ಲಿ ಯಾವುದನ್ನೂ ಆ ದೇವಿ ದೇವರುಗಳು ನೀಡಿದ್ದಲ್ಲ ಎಂದು ಅವರು ತಿಳಿದುಕೊಳ್ಳುವುದಿಲ್ಲ. ಹೀಗೆ ಮಾಡುವವರು ಅತೀ ದೊಡ್ಡ ದುರಂತಕ್ಕೀಡಾಗುವಾಗ ಸ್ವಕಲ್ಪಿತ ಆರಾಧ್ಯರಲ್ಲಿ ಪ್ರಾರ್ಥಿಸಿದರೆ ಫಲಿಸುವುದಿಲ್ಲ ಎಂದು ತಿಳಿದೇ ನೇರವಾಗಿ ಅಲ್ಲಾಹನ ಮೊರೆ ಹೋಗುತ್ತಾರೆ. ಅಂದಿನ ಮುಶ್ರಿಕರು ಆಪತ್ಕಾಲದಲ್ಲಾದರೂ ಅಲ್ಲಾಹನ ಸಹಾಯಕ್ಕಾಗಿ ಮೊರೆಯಿಡುತ್ತಿದ್ದರು. ಆದರೆ ಇಂದಿನ ಕೆಲ ಮುನಾಫಿಕರು ಆಪತ್ಕಾಲದಲ್ಲಿ ಜಿನ್ನ್‌ಗಳ ಸಹಾಯ ಯಾಚಿಸಬಹುದೆಂದು ವಾದಿಸುತ್ತಾ ಮಕ್ಕಾ ಮುಶ್ರಿಕರಿಗಿಂತ ಒಂದು ಹೆಜ್ಜೆ ಮುಂದಿಟ್ಟಿದ್ದಾರೆ. ಇದು ಅಲ್ಲಾಹನನ್ನು ಕಡೆಗಣಿಸುವ ಕೃತ್ಯವಾಗಿದೆ. ಚಿಕ್ಕದಾಗಲಿ, ದೊಡ್ಡದಾಗಲಿ ಯಾವುದೇ ವಿಪತ್ತಿನ ಸಂದರ್ಭಗಳಲ್ಲಿ ರಕ್ಷಣೆಗಾಗಿ ಅಲ್ಲಾಹನೊಡನೆ ಬೇಡಿರಿ. ಸಂತೋಷದ ಸಂದರ್ಭಗಳಲ್ಲೂ ದುಃಖಕರ ಸಂದರ್ಭಗಳಲ್ಲೂ, ಐಶ್ವರ್ಯದಲ್ಲೂ, ದಾರಿದ್ರ್ಯದಲ್ಲೂ ಅಲ್ಲಾಹನನ್ನು ಸ್ಮರಿಸುವುದು ಪುಣ್ಯಕರವೆಂದು ಕುರ್‌ಆನ್ ಕಲಿಸುತ್ತದೆ.

# ಸರ್ವ ಧರ್ಮಗ್ರಂಥಗಳು ಸಾರಿದ ಏಕದೇವಾರಾಧನಾ ತತ್ವದೆಡೆಗೆ ಮನುಷ್ಯ ಮನಸ್ಸುಗಳು ಮರಳಲಿ

(ಮೊದಲ ಪುಟದಿಂದ)

ನರಕದಲ್ಲಿ ಬೀಳುವುದಕ್ಕಿಂತ ವಿಕಲಾಂಗನಾಗಿ ದೇವರಾಜ್ಯ ಪ್ರವೇಶಿಸುವುದೇ ಉತ್ತಮ. ನೀನು ಪಾಪ ಕೃತ್ಯವನ್ನೆಸಗಲು ನಿನ್ನ ಕಾಲು ಕಾರಣವಾಗುವುದಾದರೆ ಅದನ್ನು ಕಡಿದು ಬಿಡು. ಎರಡು ಕಾಲುಗಳೊಂದಿಗೆ ನರಕದಲ್ಲಿ ಉರಿಯುವುದಕ್ಕಿಂತ ಒಂಟಿ ಕಾಲಿನವನಾಗಿ ಸ್ವರ್ಗರಾಜ್ಯವನ್ನು ಪ್ರವೇಶಿಸುವುದೇ ಉತ್ತಮ. ನೀನು ಪಾಪ ಮಾಡಲು ನಿನ್ನ ಕಣ್ಣು ಕಾರಣವಾಗುವುದಾದರೆ ಅದನ್ನು ಕಿತ್ತು ತೆಗೆದುಬಿಡು. ಎರಡು ಕಣ್ಣುಗಳ ಸಹಿತ ನರಕಕ್ಕೆ ಪ್ರವೇಶಿಸುವುದಕ್ಕಿಂತ ಒಕ್ಕಣ್ಣನಾಗಿ ಸ್ವರ್ಗರಾಜ್ಯವನ್ನು ಪ್ರವೇಶಿಸುವುದೇ ಉತ್ತಮ. ಆ ನರಕದಲ್ಲಿ ಹುಳಗಳು ಸಾಯುವುದಿಲ್ಲ. ಬೆಂಕಿ ಆರುವುದೂ ಇಲ್ಲ." (ಮಾರ್ಕೋಸ್ 9:43-50)

ಅಂತಿಮ ದೇವ ಗ್ರಂಥವಾದ ಪವಿತ್ರ ಕುರ್‌ಆನಿನ ಮೂರರಲ್ಲೊಂದು ಭಾಗದಲ್ಲೂ ಮರಣಾನಂತರ ಜೀವನದ ಕುರಿತು ವಿವರಿಸಲಾಗಿದೆ. ಮರಣಾನಂತರ ಜೀವನದಲ್ಲಿ ರಕ್ಷಣೆ ಸಿಗಲು ಮತ್ತು ಸ್ವರ್ಗ ಪ್ರವೇಶಿಸಲು ಏನೆಲ್ಲಾ ಮಾಡಬೇಕು, ಏನೆಲ್ಲಾ ಮಾಡಬಾರದು ಎಂದು ಕುರ್‌ಆನ್ ಸ್ಪಷ್ಟವಾಗಿ ಜನರಿಗೆ ಕಲಿಸುತ್ತದೆ. ಕುರ್‌ಆನ್ ಹೇಳುವುದನ್ನು ನೋಡಿರಿ: "ಪ್ರತಿಯೊಬ್ಬನಿಗೂ ಮರಣದ ರುಚಿ ನೋಡಲಿಕ್ಕಿದೆ ಮತ್ತು ನಿಮ್ಮ (ಕರ್ಮಗಳ) ಪ್ರತಿಫಲವನ್ನು ಪುನರುತ್ಥಾನದಂದು ನಿಮಗೆ ಕೊಡಲಾಗುವುದು. ಹಾಗಾಗಿ ಯಾರು ನರಕದಿಂದ ದೂರೀಕರಿಸಲ್ಪಟ್ಟು ಸ್ವರ್ಗಕ್ಕೆ ಪ್ರವೇಶಿಸಲ್ಪಡುತ್ತಾನೋ ಅವನು ನಿಜವಾಗಿಯೂ ಸೌಭಾಗ್ಯ ಪಡೆದನು. ಈ ಲೌಕಿಕ ಜೀವನವು ವಂಚನೆಯ ಸಾಧನವಲ್ಲದೆ ಇನ್ನೇನೂ ಅಲ್ಲ." (ಕುರ್‌ಆನ್ 3:185)

ಎಲ್ಲಾ ಧರ್ಮಗಳು ಮರಣಾನಂತರ ಜೀವನದ ಕುರಿತು ಪ್ರತಿಪಾದಿಸುತ್ತವೆಯೆಂಬುದು ಸ್ಪಷ್ಟ. ಭೂಮಿಗೆ ನಿಯೋಗಿಸಲ್ಪಟ್ಟ ಸರ್ವ ಪ್ರವಾದಿಗಳು ಉಪದೇಶಿಸಿದ್ದು ಅವರನ್ನು ನಿಯೋಗಿಸಿದ ದೇವನ ಕಡೆಯ ಸಂದೇಶದ ಆಧಾರದಲ್ಲಾಗಿದೆ. ಅದು ನಿಜವೇ ಎಂದು ಪರಿಶೋಧಿಸಲು ಲೌಕಿಕ ಉಪಕರಣಗಳಿಂದ ಸಾಧ್ಯವಿಲ್ಲ. ಪ್ರವಾದಿಗಳು ಸತ್ಯಸಂಧರಾಗಿದ್ದರೆಂದು ಕಾಣಲು ಸಾಧ್ಯವಾಗುತ್ತದೆ. ಪ್ರವಾದಿಗಳು ಸುಳ್ಳರು, ವಂಚಕರೆಂದು ಅವರ ಶತ್ರುಗಳಿಗೆ ಸಹ ಅಭಿಪ್ರಾಯವಿರಲಿಲ್ಲ.

## ಅಂತಿಮ ಪ್ರವಾದಿಯ ಕುರಿತಾದ ಭವಿಷ್ಯವಾಣಿಗಳು:

ವಿವಿಧ ಸಮುದಾಯಗಳಿಗೆ ನಿಯೋಜಿತರಾಗಿದ್ದ ಪ್ರವಾದಿಗಳ ಬೋಧನಾ ದೌತ್ಯವು ಆಯಾ ಸಮುದಾಯಗಳಿಗೆ ಮಾತ್ರ ಸೀಮಿತವಾಗಿತ್ತು. ಒಂದೇ ಕಾಲದಲ್ಲಿ ವ್ಯತ್ಯಸ್ತ ಸಮುದಾಯಗಳಲ್ಲಿ ಒಂದಕ್ಕಿಂತ ಹೆಚ್ಚು ಪ್ರವಾದಿಗಳು ದೌತ್ಯ ನಿರ್ವಹಿಸಿದ್ದಾರೆ. ಸಮಸ್ತ ಲೋಕಕ್ಕೆ ಸ್ವೀಕರಿಸಲು ಯೋಗ್ಯವಾದ ಸಂದೇಶಗಳ ಸಹಿತ ಮಹಾನ್ ಪ್ರವಾದಿಯೊಬ್ಬರು ಆಗಮಿಸಲಿದ್ದಾರೆಂದು ಎಲ್ಲಾ ಸಂದೇಶವಾಹಕರು ಭವಿಷ್ಯ ನುಡಿದಿದ್ದಾರೆ. ಬೈಬಲ್‌ನ ಹೊಸ ಹಾಗೂ ಹಳೆಯ ಒಡಂಬಡಿಕೆಗಳಲ್ಲೂ ಹಿಂದೂ ಪುರಾಣಗಳಲ್ಲೂ ಈ ಕುರಿತು ಪ್ರಸ್ತಾಪಿಸಲಾಗಿದೆ.

ವ್ಯಾಸ ಮುನಿ ನುಡಿದಿರುವುದನ್ನು ನೋಡಿರಿ: "ಏದಸ್ಮಿನ್ನಂತರೇ ಮ್ಲೇಛ ಆಚಾರ್ಯೇಣ ಸಮನ್ವಿತ ಮಹಾಮದ ಇದಿಖ್ಯಾದ: ಶಿಷ್ಯ ಶಾಖಿಂ ಸಮನ್ವಿತಂ"

ಮಹಾಮದ್ ಎಂಬ ಹೆಸರಿನ ವಿದೇಶಿಯನಾದ ಆಚಾರ್ಯನೊಬ್ಬನು ತನ್ನ ಅನುಚರರೊಂದಿಗೆ ಪ್ರತ್ಯಕ್ಷಗೊಳ್ಳಲಿದ್ದಾನೆ. (ಭವಿಷ್ಯತ್ ಪುರಾಣ 3:3:3:5)

"ಆತನ ಅನುಯಾಯಿಗಳು ಮುಂಜಿ ಮಾಡುವರು. ಅವರು ಜುಟ್ಟು ಇಡಲಾರರು, ಗಡ್ಡ ಬೆಳೆಸುವರು. ಅವರು ಕ್ರಾಂತಿಕಾರಿಗಳಾಗಿರುವರು. ಪ್ರಾರ್ಥನೆಗೆ ಬರಲಿಕ್ಕಾಗಿ ಜೋರಾಗಿ ಕರೆಕೊಡುವರು. ಹಂದಿಯ ಹೊರತು ಇತರ ಹೆಚ್ಚಿನ ಪ್ರಾಣಿಗಳನ್ನು ಅವರು ತಿನ್ನುವರು. ಧರ್ಮವನ್ನು ಮಲಿನಗೊಳಿಸುವವರೊಂದಿಗೆ ಯುದ್ಧ ಮಾಡುವುದರಿಂದಾಗಿ ಅವರನ್ನು ಮುಸ್ಸೈಲನವರೆಂದು ಹೇಳಲಾಗುತ್ತದೆ." (ಭವಿಷ್ಯತ್ ಪುರಾಣ 3:3:3:25-28) ಬರಲಿರುವ ಪ್ರವಾದಿಯ ಕುರಿತು ಯೇಸು ಕ್ರಿಸ್ತರು ಹೀಗೆ ಹೇಳಿರುವರು.

"ಆದರೂ ನಾನು ನಿಮ್ಮೊಡನೆ ಸತ್ಯವನ್ನು ಹೇಳುತ್ತೇನೆ. ನಾನು ಹೋಗುವುದು ನಿಮ್ಮ ಒಳಿತಿಗೇ. ನಾನು ಹೋಗದಿದ್ದರೆ ಸಹಾಯಕನು ನಿಮ್ಮ ಬಳಿಗೆ ಬರಲಾರನು. ನಾನು ಹೋದರೆ ಅವನನ್ನು ನಾನು ನಿಮ್ಮ ಬಳಿಗೆ ಕಳುಹಿಸುವೆನು. ಅವನು ಬರುವಾಗ ಪಾಪ, ನ್ಯಾಯ, ನೀತಿ ಮುಂತಾದವುಗಳ ಕುರಿತು ಲೋಕಕ್ಕೆ ತಿಳಿಸುವನು" (ಯೋಹನ್ನಾನ್ 16:7,8)

ಮಾನವ ರಾಶಿ ಕಾದುಕೊಂಡಿದ್ದ, ವೇದ ಗ್ರಂಥಗಳು ಭವಿಷ್ಯ ನುಡಿದಿದ್ದ ಕೊನೆಯ ಪ್ರವಾದಿ ಕ್ರಿ.ಶ. 570 ಆಗೋಸ್ತು 29ರಂದು ಅರೇಬಿಯಾದಲ್ಲಿ ಜನಿಸಿದರು. ವಿಷ್ಣು ಪುರಾಣದಲ್ಲಿ ಪ್ರಸ್ತಾಪಿಸಿದಂತೆ ಸುಮತಿ (=ಆಮಿನಾ) ಮತ್ತು ವಿಷ್ಣು ಭಗತ್ (=ಅಬ್ದುಲ್ಲಾಹ್) ಎಂಬ ದಂಪತಿಯ ಪುತ್ರನಾಗಿ ಮುಹಮ್ಮದ್ ಜನ್ಮ ತಾಳುತ್ತಾರೆ. ಬೈಬಲ್‌ನ ಹಳೆಯ ಒಡಂಬಡಿಕೆಯಲ್ಲಿ ಪ್ರಸ್ತಾಪಿಸಿದಂತೆ ಮುಹಮ್ಮದ್(ಸ)ರ ಆಗಮನದೊಂದಿಗೆ ಪ್ರವಾದಿತ್ವದ ರಾಜದಂಡ ಯಹೂದರಿಂದ ಕೈ ತಪ್ಪಿತು. ಮುಹಮ್ಮದ್(ಸ)ರವರ ನಲ್ವತ್ತನೇ ವರ್ಷ ಪ್ರಾಯದಲ್ಲಿ ದೇವನು ಅವರನ್ನು ಪ್ರವಾದಿಯಾಗಿ ನಿಯೋಗಿಸುತ್ತಾನೆ. ಮುಹಮ್ಮದ್(ಸ)ರು ಕೇವಲ ಅರೇಬಿಯಾಕ್ಕೆ ಮಾತ್ರವಲ್ಲ, ಕೇವಲ ಮುಸಲ್ಮಾನರಿಗೆ ಮಾತ್ರವಲ್ಲ, ಜಗತ್ತಿನ ಕಟ್ಟಕಡೆಯ ಮನುಷ್ಯನವರೆಗಿನ ಸಕಲ ಮಾನವರಿಗೂ ಪ್ರವಾದಿಯಾಗಿದ್ದಾರೆ.

## ಪವಿತ್ರ ಕುರ್‌ಆನ್

ನಿರಕ್ಷರಿಯಾಗಿದ್ದ ಅಂತಿಮ ಪ್ರವಾದಿ ಮುಹಮ್ಮದ್(ಸ)ರ ಮೂಲಕ ಅವತೀರ್ಣಗೊಂಡಿರುವ ದೇವಗ್ರಂಥವಾದ ಪವಿತ್ರ ಕುರ್‌ಆನ್ ಅದ್ಭುತಗಳ ಅದ್ಭುತವಾಗಿದೆಯೆಂಬುದರಲ್ಲಿ ಸಂದೇಶವಿಲ್ಲ. ನಿಮಿಷ ಮಾತ್ರದಲ್ಲಿ ಸುಂದರವಾದ ಕವಿತೆಗಳನ್ನು ರಚಿಸಬಲ್ಲ ಕವಿಗಳಿಗೆ ಸವಾಲೆಸೆಯುವಂತಹ ರೀತಿಯಲ್ಲಿ ಅವರನ್ನೆಲ್ಲಾ ವಿಸ್ಮಯಗೊಳಿಸುವ ಗದ್ಯವೂ ಪದ್ಯವೂ ಅಲ್ಲದ ಶೈಲಿಯಲ್ಲಿ ಓದು ಬರಹ ವರಿಯದ ಮುಹಮ್ಮದ್(ಸ)ರು ಕುರ್‌ಆನ್ ಎಂಬ ಅದ್ಭುತ ಗ್ರಂಥವನ್ನು ಜಗತ್ತಿನ ಮುಂದೆ ಅನಾವರಣಗೊಳಿಸಿದರು. ಕುರ್‌ಆನಿನ ಆ ಸಂದೇಶಗಳನ್ನು ಕೇಳಿ ಜಗತ್ತು ಎಚ್ಚರಗೊಂಡು ಉದಾತ್ತವಾದ ಸ್ವಭಾವದೆಡೆಗೆ ಪಥ ಪರಿವರ್ತಿಸಿತು. ಒಂದಿಷ್ಟೂ ವ್ಯತ್ಯಾಸಗೊಳ್ಳದೆ , ಯಾರ ಹಸ್ತಕ್ಷೇಪಕ್ಕೂ ಬಲಿಯಾಗದೆ ಅವತೀರ್ಣಗೊಂಡ ಅದೇ ರೂಪದಲ್ಲಿ ಇಂದು ಸಹ ನೆಲೆ ನಿಂತಿರುವುದು ಕುರ್‌ಆನ್ ದೈವಿಕ ಗ್ರಂಥ ಎಂಬುದರ ಜ್ವಲಂತ ನಿದರ್ಶನವಾಗಿದೆ. ಈ ಗ್ರಂಥದಲ್ಲಿ ಯಾವುದೇ ವೈರುಧ್ಯತೆಯಾಗಲಿ, ಭಿನ್ನತೆ ಯಾಗಲಿ ಕಾಣಲು ಸಾಧ್ಯವಿಲ್ಲ. ಕುರ್‌ಆನಿನ ನಿಯಮಗಳೆಲ್ಲವೂ ಸಾರ್ವಕಾಲಿಕವಾಗಿದೆ. ಈ ನಿಯಮಗಳಿಗೆ ಸರಿಸಮಾನವಾದ ಒಂದು ನಿಯಮವನ್ನು ಜಗತ್ತು ಇದುವರೆಗೆ ಕಂಡಿಲ್ಲ. ಕುರ್‌ಆನ್ ಎಲ್ಲಾ ಅರ್ಥದಲ್ಲೂ ಸರ್ವ ಮಾನವರಿಗೂ ಅಂಗೀಕರಿಸಲು ಯೋಗ್ಯವಾದ ಮಾರ್ಗದರ್ಶಿ ಗ್ರಂಥವಾಗಿದೆ. "ಇದು ಆ ಗ್ರಂಥ, ಇದರಲ್ಲಿ ಸಂಶಯವೇ ಇಲ್ಲ. ದೇವ ಭಯವುಳ್ಳವರಿಗೆ ಇದು ನೇರ ಮಾರ್ಗವನ್ನು ತೋರಿಸುತ್ತದೆ." (ಕುರ್‌ಆನ್: 2)

## ಎಲ್ಲಾ ಪ್ರವಾದಿಗಳ ಸಾರಿದ ಧರ್ಮ

ಪ್ರವಾದಿ ಮುಹಮ್ಮದ್(ಸ)ರು ಇಸ್ಲಾಮಿನ ಸ್ಥಾಪಕರಲ್ಲ. ಅವರು ಇಸ್ಲಾಮಿನ ಕೊನೆಯ ಪ್ರವಾದಿಯಾಗಿದ್ದಾರೆ. ಅವರು ಎಲ್ಲಾ ಪ್ರವಾದಿಗಳ ಉತ್ತರಾಧಿಕಾರಿಯಾಗಿದ್ದಾರೆ. ಜಗತ್ತಿಗೆ ಬಂದ ಸಕಲ ಪ್ರವಾದಿಗಳು ಸಾರಿದ ಧರ್ಮ ಇಸ್ಲಾಮ್ ಮಾತ್ರವಾಗಿದೆ. ಇಸ್ಲಾಮ್ ಎಂದರೆ ಸಮರ್ಪಣೆಯಾಗಿದೆ. ಸರ್ವಶಕ್ತನಾದ ಅಲ್ಲಾಹನಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡವನೇ ಮುಸ್ಲಿಮ್. ಈ ಸಮರ್ಪಣೆ ಹೇಗಿರಬೇಕೆಂದು ತೋರಿಸಿಕೊಡಲಿಕ್ಕಾಗಿ ಬಂದವರಾಗಿದ್ದಾರೆ ಪ್ರವಾದಿಗಳು. ಅವರೆಲ್ಲರೂ ದೇವ ನಿಯಮಗಳನುಸಾರ ಮಾನವ ಸಮೂಹಕ್ಕೆ ಮಾದರಿಯೂಗಿ ಬದುಕಿದವರಾಗಿದ್ದಾರೆ. ಪ್ರವಾದಿ ಶ್ಯಂಖಲೆಯ ಕೊನೆಯ ಕೊಂಡಿಯಾಗಿರುವ ಪ್ರವಾದಿ ಮುಹಮ್ಮದ್(ಸ)ರು ದೇವ ಗ್ರಂಥಗಳ ಕೊನೆಯ ಆವೃತ್ತಿಯಾದ ಪವಿತ್ರ ಕುರ್‌ಆನ್ ಎಂಬ ನಿಯಮ ಸಂಹಿತೆಯನುಸಾರ ಬದುಕಿ ಅದರಂತೆ ಇತರರಿಗೂ ಬದುಕಲು ಕಲಿಸುವ ಮೂಲಕ ಜಗತ್ತಿನಲ್ಲಿ ಉತ್ತಮ ಸಮುದಾಯವೊಂದನ್ನು ಕಟ್ಟಿ ಬೆಳೆಸಿದರು.

## ಏಕದೇವಾರಾಧನಾ ಸಿದ್ಧಾಂತ:

ಪ್ರಪಂಚದಲ್ಲಿರುವ ಸರ್ವ ವಸ್ತುಗಳು ಅದರಾಚೆಗಿನ ಒಂದು ಕಾರಣವನ್ನು ಹುಡುಕುತ್ತವೆ. ಕಾರಣದ ಅವಶ್ಯಕತೆಯಿಲ್ಲದ ಯಾವುದನ್ನೂ ನಮಗೆ ಕಾಣಲು ಸಾಧ್ಯವಿಲ್ಲ. ಹಾಗಾಗಿ ಕಾರಣಗಳ ಅವಶ್ಯಕತೆಯಿಲ್ಲದ ಪರಾಶಕ್ತಿ ಪ್ರಪಂಚಕ್ಕಿಂತ ಹೊರಗಿರುವಂತಹದ್ದಾಗಿರಬೇಕು. ಪದಾರ್ಥಾತೀತವಾಗಿರಬೇಕು. ಪ್ರಪಂಚದ ಚಿಕ್ಕದೂ, ದೊಡ್ಡದೂ ಆದ ಸಕಲ ಅದ್ಭುತಗಳ ಮೂಲ ಕಾರಣವನ್ನು ಇಸ್ಲಾಮ್ 'ಅಲ್ಲಾಹು' (ದೇವನು) ಎಂದು ಕರೆಯುತ್ತದೆ. ಮಾನವನಿಗೆ ಸೃಷ್ಟಿ ಪ್ರಪಂಚದ ಕುರಿತಾಗಿ ಮಾತ್ರವೇ ವಿಶದೀಕರಿಸಲು ಸಾಧ್ಯ. ಆದ್ದರಿಂದಲೇ ಪದಾರ್ಥತೀತವಾದ ದೇವಾಸ್ತಿತ್ವವು ಮನುಷ್ಯನ ವಿವರಣೆಗತೀತವಾಗಿದೆ. ಅಲ್ಲಾಹು ಸ್ವತಃ ತಿಳಿಸಿ ಕೊಟ್ಟಿರುವ ದಿವ್ಯ ವಚನಗಳ ಮೂಲಕ ಮಾತ್ರವೇ ಅವನ ಅಸ್ತಿತ್ವದ ಗುಣಗಳ ಕುರಿತು ತಿಳಿಯಲು ಸಾಧ್ಯ. ಹಿಂದೂ ಗ್ರಂಥಗಳಲ್ಲಿ ಕೂಡಾ ಏಕದೇವ ವಿಶ್ವಾಸವನ್ನು ಕಾಣಬಹುದಾಗಿದೆ.

"ಆದಿಯಲ್ಲಿ ಹಿರಣ್ಯಗರ್ಭನು ಮಾತ್ರವೇ ಅಸ್ತಿತ್ವದಲ್ಲಿದ್ದನು. ಅವನೇ ಸಕಲ ಲೋಕಗಳ ಸರ್ವಾಧಿಕಾರಿ. ಅವನು ಭೂಮಿಯನ್ನು, ಸ್ವರ್ಗವನ್ನು ಆಯಾ ಸ್ಥಾನಗಳಲ್ಲಿ ಸ್ಥಾಪಿಸಿದನು. ಸಕಲ ಚರಾಚರಗಳುಂಟಾದುದು ಅವನಿಂದಲೇ. ಲೋಕವೆಲ್ಲಾ ಅವನ ಆಜ್ಞೆಗಳನ್ನು ಅನುಸರಿಸುತ್ತವೆ. ಆದ್ದರಿಂದ ಅವನಿಗೆ ಮಾತ್ರವೇ ತ್ಯಾಗ ಬಲಿಗಳನ್ನರ್ಪಿಸಿರಿ." (ಋಗ್ವೇದ - 10:121:1) ಇದೇ ತತ್ವಗಳಡಗಿರುವ

(8ನೇ ಪುಟಕ್ಕೆ)




ಲೇ: ಉಮರ್ ಮೌಲವಿ

ಕನ್ನಡಕ್ಕೆ: ಇಸ್ಮಾಈಲ್ ಶಾಫಿ

# ಫಾತಿಹಾದ ತೀರದಲ್ಲಿ

(ಹಿಂದಿನ ಸಂಚಿಕೆಯಿಂದ)

ಒಂದು ಕರ್ಮವನ್ನು ಬಿದ್‌ಅತ್ತಾಗಿ ಪರಿಗಣಿಸುವುದಕ್ಕೆ ಎರಡು ವಿಷಯಗಳು ಹೊಂದಿಕೆಯಾಗಬೇಕು. ಆ ಪೈಕಿ ಒಂದನೆಯದರ ಕುರಿತು ಇದುವರೆಗೆ ವಿವರಿಸಲಾಗಿದೆ. ಅಂದರೆ ಪ್ರವಾದಿ(ಸ)ರಿಂದ ಆಧಾರವಿಲ್ಲದ್ದು. ಇನ್ನು ಎರಡನೆಯದು ಧರ್ಮದ ಹೆಸರಲ್ಲಿ ಮತ್ತು ಪರಲೋಕ ಮೋಕ್ಷಕ್ಕಾಗಿ ಮಾಡುವಂತಹದಾಗಿದೆ. ಧರ್ಮದಲ್ಲಿ ಆಚಾರವಲ್ಲದ ಹೊಸ ವಿಚಾರಗಳು ಬಿದ್‌ಅತ್ತಾಗುವುದಿಲ್ಲ. ಬಸ್ಸು, ಕಾರು, ರೈಲು, ವಿಮಾನ ಮುಂತಾದ ವಾಹನಗಳನ್ನು ಪ್ರವಾದಿ(ಸ)ರು ಉಪಯೋಗಿಸಲಿಲ್ಲ ತಾನೆ. ಹಾಗಾಗಿ ಅವೆಲ್ಲಾ ಬಿದ್‌ಅತ್ ಎಂದು ಹೇಳುವ ಕೆಲವರಿದ್ದಾರೆ. ವಾಸ್ತವದಲ್ಲಿ ಅದು ಬಿದ್‌ಅತ್ ಅಲ್ಲ. ಏಕೆಂದರೆ ಅವೆಲ್ಲಾ ಇಸ್ಲಾಮಿನಲ್ಲಿ ಹೊಸ ಕಾರ್ಯಗಳಲ್ಲ. ಅವೆಲ್ಲಾ ಲೌಕಿಕ ಸೌಕರ್ಯಗಳು. "ನಮಾಝ್ ಯಾವ ರೀತಿ ದೀನ್‌ನಲ್ಲಿ ಸೇರಿದೆಯೋ ಅದೇ ರೀತಿ ರೈಲಿಗೆ ಹತ್ತುವುದು ಸಹಾ ದೀನ್‌ನಲ್ಲಿ ಸೇರಿದ್ದು" ಎಂದು ಕೇರಳ ಜಮಾಅತೆ ಇಸ್ಲಾಮಿ ಸ್ಥಾಪಕ ಅಮೀರ್ ನನ್ನಲ್ಲಿ ಹೇಳಿದ್ದರು. ಆಗ ನಾನು "ಹಾಗಾದರೆ ರೈಲಿನ ಡ್ರೈವರ್ ದೀನನ್ನು ನಡೆಸುವವನು ಎಂದಾಗುವುದಿಲ್ಲವೇ, ಇದೇನು ಹೇಳುತ್ತಿದ್ದೀರಿ ನೀವು? ಎಂದು ಕೇಳಿದೆ. ಅದಕ್ಕೆ ಅವರು "ನೀವು ದೀನ್ ಮತ್ತು ದುನ್ಯಾಗಳನ್ನು ಎರಡಾಗಿ ಮಾಡುತ್ತೀರಿ" ಎಂದು ನನ್ನನ್ನು ಆಕ್ಷೇಪಿಸಿದರು. ದೀನ್ ಮತ್ತು ದುನ್ಯಾ ಎಂಬುದು ಜಮಾಅತೆ ಇಸ್ಲಾಮಿನ ಬಹು ದೊಡ್ಡ ಸಿದ್ಧಾಂತವಾಗಿದೆ.

## ದೀನ್‌ನಲ್ಲಿ ಹೊಸತು ಮತ್ತು ದುನ್ಯಾದಲ್ಲಿ ಹೊಸತು

ವಾಸ್ತವದಲ್ಲಿ ದೀನ್ ಮತ್ತು ದುನ್ಯಾಗಳನ್ನು ಎರಡಾಗಿಸಿದ್ದು ಅಲ್ಲಾಹು ಮತ್ತು ರಸೂಲರಾಗಿದ್ದಾರೆ. ಪವಿತ್ರ ಕುರ್‌ಆನಿನಲ್ಲಿ ದೀನ್ ಎಂದು ಉಲ್ಲೇಖಿಸಿದ ಸ್ಥಳಗಳಲ್ಲಿ ಅದನ್ನು ತೆಗೆದು ದುನ್ಯಾ ಎಂದು ಬದಲಿಸಿ ನೋಡಿರಿ. ಸರಿಯಾಗುವುದಾದರೆ ಇವರ ವಾದವನ್ನು ಅಂಗೀಕರಿಸಬಹುದು.

"ನಿಶ್ಚಯವಾಗಿಯೂ ಅಲ್ಲಾಹು ನಿಮಗೆ ದೀನನ್ನು ಆಯ್ಕೆ ಮಾಡಿ ಕೊಟ್ಟಿರುತ್ತಾನೆ" (ಅಲ್‌ಬಕರಃ 132) ಎಂದು ಹೇಳಿದಲ್ಲಿ ದುನ್ಯಾವನ್ನು ಆಯ್ಕೆ ಮಾಡಿಕೊಟ್ಟಿದ್ದಾನೆ ಎಂದು ಹೇಳಲಾದೀತೇ? ಮಾತ್ರವಲ್ಲ, ದೀನನ್ನು ಪ್ರೀತಿಸುವವನು ಎಂದು ಹೇಳುವುದು ಪ್ರಶಂಸೆಯೂ ದುನ್ಯಾವನ್ನು ಪ್ರೀತಿಸುವವನು ಎಂದು ಹೇಳುವುದು ಆಕ್ಷೇಪವೂ ಆಗಿದೆ. ಹೀಗಿದ್ದೂ ಜಮಾಅತೆ ಇಸ್ಲಾಮಿಗಳು ದೀನ್ ಮತ್ತು ದುನ್ಯಾಗಳು ಒಂದೇ ಎಂದು ಹೇಳುತ್ತಾರೆ. ಇವರಿಗೇನಾಗಿದೆಯೆಂದು ತಿಳಿಯುತ್ತಿಲ್ಲ.

ಪ್ರವಾದಿ(ಸ)ರು ವಫಾತ್ ಆದಾಗ ಖಲೀಫರನ್ನು ಆಯ್ಕೆ ಮಾಡುವ ವಿಷಯದಲ್ಲಿ ಮೊದಲು ಭಿನ್ನಾಭಿಪ್ರಾಯವುಂಟಾಗಿದ್ದರೂ ಕೊನೆಗೆ ಅಬೂಬಕರ್(ರ)ರನ್ನು ನಿಶ್ಚಯಿಸುವುದರಲ್ಲಿ ಎಲ್ಲರೂ ಒಂದಾದರು. ಅದಕ್ಕೆ ಅವರು ಹೇಳಿದ ಸಮರ್ಥನೆ ಗಮನಾರ್ಹವಾಗಿದೆ.

"ಪ್ರವಾದಿ(ಸ)ರು ನಮ್ಮ ದೀನಿಗಾಗಿ ಅವರನ್ನು ತೃಪ್ತಿಪಟ್ಟರು. ಹಾಗಿರುವಾಗ ನಮ್ಮ ದುನ್ಯಾಕ್ಕಾಗಿ ಅವರನ್ನು ನಾವು ತೃಪ್ತಿ ಪಡದಿರಲಾದೀತೇ? ಎಂದಾಗಿತ್ತು ಅವರ ಸಮರ್ಥನೆ. ಪ್ರವಾದಿ(ಸ)ರಿಗೆ ಖಾಯಿಲೆ ತೀವ್ರಗೊಂಡಾಗ ನಮಾಝ್‌ಗೆ ಇಮಾಮ್ ಆಗಿ ನಿಲ್ಲಲು ಅಬೂಬಕರ್(ರ)ರೊಡನೆ ಆದೇಶಿಸಿದರು. ದೀನ್‌ಗಾಗಿ ಪ್ರವಾದಿ(ಸ)ರು ತೃಪ್ತಿಪಟ್ಟರು ಎಂದು ಹೇಳಿದ್ದು ಇದನ್ನೇ. ನಮ್ಮ ದುನ್ಯಾ ಎಂದು ಹೇಳಿದ್ದು ಆಡಳಿತದ ಕುರಿತಾಗಿದೆ. ಇದುವೇ ಮುಸ್ಲಿಮರ ಆದರ್ಶ. ಆದರೆ ಜಮಾಅತೆ ಇಸ್ಲಾಮಿಗಳು ಹೇಳುವುದೇನೆಂದರೆ ನಮಾಝ್‌ನ ಹಾಗೆಯೇ ರೈಲು ಕೂಡಾ ದೀನ್ ಆಗಿದೆ ಎಂದು. ಹೇಗಿದೆ ಇವರ ತತ್ವ?

ಪರಲೋಕ ಮೋಕ್ಷದ ಹೆಸರಲ್ಲಿ ಆಚರಿಸಲಾಗುವ ಮಾಲೆ, ಮೌಲೀದ್, ರಾತೀಬ್, ತ್ವರೀಖತ್‌ಗಳೇಲ್ಲವೂ ಬಿದ್‌ಅತ್ ಮತ್ತು ದಲಾವತ್‌ಗಳಾಗಿವೆ.

ಒಟ್ಟಿನಲ್ಲಿ ಪ್ರವಾದಿ(ಸ)ರಿಂದ ಆಧಾರಗಳಿಲ್ಲದ ಮತ್ತು ಪರಲೋಕ ಮೋಕ್ಷವನ್ನು ಬಯಸಿ ಮಾಡಲಾಗುವ ಹೊಸ ಧಾರ್ಮಿಕ ಆಚರಣೆಗಳೆಲ್ಲವೂ ಬಿದ್‌ಅತ್ತಾಗಿದೆ.

ನಮ್ಮ ಜನರ ಅತೀ ದೊಡ್ಡ ಬುದ್ಧಿಗೇಡು ಯಾವುದೆಂದರೆ ದೀನ್‌ನಲ್ಲಿ ಹೊಸತು ಮತ್ತು ದುನ್ಯಾದಲ್ಲಿ ಹೊಸತನ್ನು ಬೇರ್ಪಡಿಸಿ ತಿಳಿದುಕೊಳ್ಳದಿರುವುದಾಗಿದೆ. ಅದೇ ರೀತಿ ಪ್ರವಾದಿ(ಸ)ರು ನಿರ್ದೇಶಿಸಿದ್ದನ್ನೂ ಬೇರ್ಪಡಿಸಲಿಲ್ಲ. ಎಷ್ಟರವರೆಗೆಂದರೆ ವಿಶುದ್ಧ ಕುರ್‌ಆನನ್ನು ಮುಸ್ಹಫ್‌ನಲ್ಲಿ ಬರೆದಿಟ್ಟದ್ದು ಬಿದ್‌ಅತ್ತಾಗಿದೆಯೆಂದು ಕೂಡಾ ಅವರು ಹೇಳಿದ್ದಾರೆ. ವಾಸ್ತವದಲ್ಲಿ ಅದು ಪ್ರವಾದಿ(ಸ)ರು ಆದೇಶಿಸಿದ ಮತ್ತು ಜಾರಿಗೆ ತಂದ ವಿಷಯವಾಗಿದೆ. ಆದ್ದರಿಂದ ಅದನ್ನು ಎಂದಿಗೂ ಬಿದ್‌ಅತ್ ಎಂದು ಹೇಳಕೂಡದು. ರಸ್ತೆ ರಚಿಸುವುದು, ಸೇತುವೆ ಕಟ್ಟುವುದು ಇತ್ಯಾದಿಗಳು ಬಿದ್‌ಅತ್ ಎಂದು ಹೇಳುವ ಕೆಲವರಿದ್ದಾರೆ. ಅದು ತಪ್ಪು. ಏಕೆಂದರೆ ಅದು ದೀನ್‌ನಲ್ಲಿ ಹೊಸತಲ್ಲ, ದುನ್ಯಾದಲ್ಲಿ ಹೊಸತು. ವಾಸ್ತವದಲ್ಲಿ ಬಿದ್‌ಅತ್ ಅಲ್ಲದ್ದೂ ನಮಗೆ ಅತೀ ಅಗತ್ಯವಿರುವಂತದ್ದೂ ಆದ ವಿಷಯಗಳ ಕುರಿತು ಬಿದ್‌ಅತ್ ಎಂದು ಹೇಳುತ್ತಾ, ಬಿದ್‌ಅತ್‌ಗಳಲ್ಲಿ ಒಳ್ಳೆಯ ಬಿದ್‌ಅತ್‌ಗಳೂ ಇವೆಯೆಂದು ಹೇಳುತ್ತಾ ಬಿದ್‌ಅತ್‌ಗಳ ಕುರಿತಾಗಿರುವ ವಿರೋಧವನ್ನು ಇಲ್ಲವಾಗಿಸುವ ಯತ್ನದಲ್ಲಿ ಶೈತಾನನು ಬಹುತೇಕ ಯಶಸ್ವಿಯಾಗಿದ್ದಾನೆ. ಅಲ್ಲಾಹು ನಮ್ಮನ್ನು ಕಾಪಾಡಲಿ.

ಮದೀನದ ಮಸೀದಿಯಲ್ಲಿ ಹಲವು ಜಮಾಅತುಗಳಾಗಿ ನಿರ್ವಹಿಸಲಾಗುತ್ತಿದ್ದುದನ್ನು ಒಂದೇ ಜಮಾಅತ್ತಾಗಿ ನಿರ್ವಹಿಸುವಂತೆ ಉಮರ್(ರ)ರವರು ಆದೇಶಿಸಿದರು. ಆ ರೀತಿಯಾಗಿ ತರಾವೀಹ್ ನಿರ್ವಹಿಸುವುದನ್ನು ಕಂಡ ಉಮರ್(ರ)ರಿಗೆ ಬಹಳ ಸಂತೋಷವಾಗಿ ಇದು ಬಹಳ ಒಳ್ಳೆಯ ಬಿದ್‌ಅತ್ ಎಂದು ಹೇಳಿದ್ದರಲ್ಲಿ ಬಿದ್‌ಅತ್ ಪ್ರೇಮಿಗಳು ವಿಜೃಂಭಿಸಬೇಕಾಗಿಲ್ಲವೆಂದು ಈಗಾಗಲೇ ಹೇಳಿದ್ದೇನೆ. ಭಾಷಾರ್ಥದಲ್ಲೂ ಸಾಂಕೇತಿಕ ಅರ್ಥದಲ್ಲೂ ಅದು ಬಿದ್‌ಅತ್ ಅಲ್ಲ. ಅದು ಬಿದ್‌ಅತ್ ಆದದ್ದು ರೂಪದಲ್ಲಿ ಮಾತ್ರ ಎಂಬುದಕ್ಕೆ ಎರಡು ಕುರ್‌ಆನ್ ವಚನಗಳನ್ನು ಉದಾಹರಣೆಗಳನ್ನು ನೀಡಿದ್ದೇನೆ. ಇನ್ನು ಹದೀಸಿನಿಂದ ಎರಡು ಉದಾಹರಣೆಗಳನ್ನು ನೀಡುತ್ತಿದ್ದೇನೆ.

"ಎರಡು ವಿಷಯಗಳಿಲ್ಲದ ಅಸೂಯೆ ಕೂಡದು. ಒಬ್ಬರಿಗೆ ಅಲ್ಲಾಹು ಸಂಪತ್ತು ದಯಪಾಲಿಸುತ್ತಾನೆ. ಅದನ್ನು ಸತ್ಯದ ಹಾದಿಯಲ್ಲಿ ವೆಚ್ಚ ಮಾಡಲು ಅಲ್ಲಾಹು ಆ ವ್ಯಕ್ತಿಗೆ ಪ್ರಭಾವ ಬೀರುತ್ತಾನೆ. ಇನ್ನೊಬ್ಬರಿಗೆ ಅಲ್ಲಾಹು ಪಾಂಡಿತ್ಯವನ್ನು ನೀಡುತ್ತಾನೆ. ಅದರನ್ವಯ ಆತ ತೀರ್ಪು ನೀಡುತ್ತಾನೆ ಮತ್ತು ಅದನ್ನು ಇತರರಿಗೆ ಕಲಿಸುತ್ತಾನೆ" ಎಂದು ಪ್ರವಾದಿ(ಸ)ರು ಹೇಳಿದ್ದಾರೆ. (ಬುಖಾರಿ)

ಒಬ್ಬ ಧನಿಕನು ಒಳ್ಳೆಯ ದಾರಿಯಲ್ಲಿ ವೆಚ್ಚ ಮಾಡುವುದನ್ನು ಕಂಡು ಇದೇ ರೀತಿ ನನಗೂ ಸಂಪತ್ತಿರುತ್ತಿದ್ದರೆ ನಾನು ಕೂಡಾ ಒಳ್ಳೆಯದಕ್ಕಾಗಿ ವೆಚ್ಚ ಮಾಡುತ್ತಿದ್ದೆ ಎಂದು ಬಯಸುವುದನ್ನು ಅಸೂಯೆ ಎಂದು ಹೇಳಲಾಗುತ್ತದೆ. ನಿಜವಾಗಿಯಾದರೆ ಇದು ಅಸೂಯೆಯಾಗುತ್ತದೆಯೇ? ಎಂದಿಗೂ ಅಲ್ಲ. ಇನ್ನೊಬ್ಬನ ಸಂಪತ್ತಾಗಲಿ, ಪಾಂಡಿತ್ಯವಾಗಲಿ ನಾಶವಾಗಲಿ ಎಂದು ಬಯಸುವುದೇ ಅಸೂಯೆ. ಇಲ್ಲಿ ಹಾಗೆ ಇಚ್ಛಿಸುವುದಿಲ್ಲ. ಅದೇ ರೀತಿ ತನಗೂ ಬೇಕಿತ್ತು ಎಂದು ಮಾತ್ರವೇ ಬಯಸಲಾಗುತ್ತದೆ. ಒಬ್ಬ ವಿದ್ವಾಂಸನ ಒಳ್ಳೆಯ ಗುಣವನ್ನು ಕಂಡು ಆ ರೀತಿ ಆಗಲು ಬಯಸುವುದು ಅಸೂಯೆಯಾಗುವುದಿಲ್ಲ. ಹಾಗಿರುವಾಗ ಇವೆರಡೂ ಅಸೂಯೆಯಾದದ್ದು ನಿಜಾರ್ಥದಲ್ಲಲ್ಲ, ರೂಪದಲ್ಲಿ ಮಾತ್ರ. ತರಾವೀಹ್‌ನ ಜಮಾಅತ್ ಕೂಡಾ ಇದೇ ರೀತಿ ರೂಪದಲ್ಲಿ ಮಾತ್ರ.

ಪ್ರವಾದಿ ಇಬ್ರಾಹೀಮ್(ಅ)ರವರು ಮೂರು ಸುಳ್ಳು ಹೇಳಿದರೆಂದು ಒಂದು ಹದೀಸ್ ಇದೆ. ಪತ್ನಿಯ ಕುರಿತು ಸಹೋದರಿ ಎಂದು ಹೇಳಿದ್ದು ಒಂದು ಸುಳ್ಳು. ವಾಸ್ತವದಲ್ಲಿ ಇದು ಸುಳ್ಳೋ? ಖಂಡಿತ ಅಲ್ಲ. ವೇದಿಕೆಯಲ್ಲಿ ನಿಂತು ಭಾಷಣ ಮಾಡುವಾಗ ಸಹೋದರ, ಸಹೋದರಿಯರೇ ಎಂದು ಹೇಳುತ್ತಾರೆ. ಸಭೆಯಲ್ಲಿ ತಂದೆ, ತಾಯಿ, ಪತ್ನಿ, ಮಕ್ಕಳು ಮುಂತಾದವರಿರುತ್ತಾರೆ. ಅವರೆಲ್ಲಾ ಸಹೋದರ, ಸಹೋದರಿಯರಾಗುತ್ತಾರೆಯೇ? ಅದು ಸುಳ್ಳೇ? ಅಲ್ಲ. ಹಾಗಾಗಿ ಇಬ್ರಾಹೀಮ್(ಅ)ರ ಮಾತು ಸುಳ್ಳಾದದ್ದು ರೂಪದಲ್ಲಿ ಮಾತ್ರ. ನಿಜಾರ್ಥದಲ್ಲಲ್ಲ. ಇನ್ನೊಂದು: ಇಬ್ರಾಹೀಮ್(ಅ)ರು ನನಗೆ ಸೌಖ್ಯವಿಲ್ಲ ಎಂದು ಹೇಳಿದ್ದು. ತನ್ನ ತಂದೆ, ಕುಟುಂಬದವರು ಮಾತ್ತು ಊರವರು ವಿಗ್ರಹಗಳಿಗೆ ಹರಕೆ, ಬಲಿ, ನೈವೇದ್ಯಗಳನ್ನರ್ಪಿಸಿ ಬಿಟ್ಟು ಹೋದ ವಸ್ತುಗಳ್ನು ಮತ್ತು ಅವರ ಪಥಭ್ರಷ್ಟತೆಯನ್ನು ಕಂಡು ಇಬ್ರಾಹೀಮ್(ಅ)ರಿಗೆ ತೀರಾ ಮನಃಕ್ಲೇಷ ಹಾಗೂ ದುಃಖ ಉಂಟಾಯಿತು. ಮಾನಸಿಕ ವೇದನೆಯಿಂದ ಅವರು ನನಗೆ ಸೌಖ್ಯವಿಲ್ಲ ಎಂದು ಹೇಳಿದ್ದೇ ವಿನಾ ಅದು ನಿಜಾರ್ಥದ ಸುಳ್ಳಲ್ಲ. ಅದು ಸುಳ್ಳಾದದ್ದು ರೂಪದಲ್ಲಿ ಮಾತ್ರ. ಇದೇ ರೀತಿ ಉದಾಹರಣೆಗಳನ್ನು ಕಾಣಬಹುದಾಗಿದೆ.

## ವಿಶ್ವಾಸದಲ್ಲಿರುವ ಬಿದ್‌ಅತ್

ಬಿದ್‌ಅತ್ ಎರಡು ವಿಧ ಎಂದು ಈ ಮೊದಲೇ ಹೇಳಿದ್ದೇನೆ. ಒಂದು: ಆಚಾರ ಸಂಬಂಧಿ ಬಿದ್‌ಅತ್. ಅದನ್ನು ವಿವರಿಸಿಯಾಗಿದೆ. ಇನ್ನು ವಿಶ್ವಾಸ ಸಂಬಂಧಿ ಬಿದ್‌ಅತ್‌ಗಳ ಕುರಿತು ನೋಡೋಣ. ಧರ್ಮದ ಆತ್ಮಕ್ಕೆ ಬಾಧಿಸಿದ ಅತಿ ಮಾರಕವಾದ ಕ್ಯಾನ್ಸರ್ ಎಂದರೆ ವಿಶ್ವಾಸ ಸಂಬಂಧಿ ಬಿದ್‌ಅತ್. ಈ ಕ್ಯಾನ್ಸರ್‌ನ ಕಾಠಿಣ್ಯವನ್ನು ತಿಳಿಯಲಿಕ್ಕಾಗಿ ಒಂದು ಉದಾಹರಣೆಯನ್ನು ಹೇಳುತ್ತೇನೆ: "ಸಹಾಬಿಯೊಬ್ಬರಿಗೆ ಒಬ್ಬ ಮುಸ್ಲಿಮ್ ಗುಲಾಮನನ್ನು ವಿಮೋಚಿಸಬೇಕಾದ ಅಗತ್ಯ ಎದುರಾಯಿತು. ಅವರು ಆ ಗುಲಾಮ ಸ್ತ್ರೀಯನ್ನು ಪ್ರವಾದಿ(ಸ)ರ ಬಳಿಗೆ ಕರೆತಂದು ಅವಳು ಮುಸ್ಲಿಮಳೇ ಎಂದು ಪರಿ

(9ನೇ ಪುಟಕ್ಕೆ)



# ವಾಟ್ಸಪ್ ಸಂದೇಶ ಕಾಲಂ

رَبَّنَا فَاغْفِرْ لَنَا ذُنُوبَنَا وَكَفِّرْ عَنَّا سَيِّئَاتِنَا وَتَوَفَّنَا مَعَ الْأَبْرَارِ ﴿١٩٣﴾

ಓ ನಮ್ಮ ಪ್ರಭು! ನಮ್ಮಿಂದ ಸಂಭವಿಸಿ ಹೋಗಿದ್ದ ಅಪರಾಧಗಳನ್ನು ಕ್ಷಮಿಸು. ನಮ್ಮಲ್ಲಿರುವ ಕೆಡುಕುಗಳನ್ನು ದೂರೀಕರಿಸು ಮತ್ತು ನಮ್ಮ ಅವಸಾನವನ್ನು ಸಜ್ಜನರೊಂದಿಗೆ ಮಾಡು. ಸೂರ ಆಲಿ ಇಮ್ರಾನ್:193



فَإِذَا عَزَمْتَ فَتَوَكَّلْ عَلَى اللَّهِ ۚ إِنَّ اللَّهَ يُحِبُّ الْمُتَوَكِّلِينَ ﴿١٥٩﴾

...ನೀವು (ಏನಾದರೂ) ತೀರ್ಮಾನ ಕೈಗೊಂಡರೆ ನೀವು ಅಲ್ಲಾಹನೊಡನೆ ಭರವಸೆ ಯಿಡಿರಿ. ನಿಶ್ಚಯ ವಾಗಿಯೂ ಅಲ್ಲಾಹು ಭರವಸೆಯಿಡುವವರನ್ನು ಪ್ರೀತಿಸುತ್ತಾನೆ. ಕುರ್‌ಆನ್ 3x159



كُلُّ نَفْسٍ ذَائِقَةُ الْمَوْتِ [185:3]

EVERY SOUL SHALL TASTE OF DEATH

ಪ್ರತೀಯೊಬ್ಬನಿಗೂ ಮರಣದ ರುಚಿ ನೋಡಲಿಕ್ಕಿದೆ

## ಒಬ್ಬ ಮುಸ್ಲಿಮನಿಗೆ ಇನ್ನೊಬ್ಬ ಮುಸ್ಲಿಮನೊಂದಿಗಿರುವ ಐದು ಹಕ್ಕು ಬಾಧ್ಯತೆಗಳು

❖ ಸಲಾಮ್‌ಹೇಳಿದರೆ ಉತ್ತರಿಸುವುದು. ❖ ಆಹ್ವಾನವನ್ನು ಸ್ವೀಕರಿಸುವುದು. ❖ ಸೀನಿದರೆ "ಅಲ್‌ಹಮ್ದುಲಿಲ್ಲಾಹ್" ಎಂದು ಹೇಳುವಾಗ "ಇರ್‌ಹಮುಕುಮುಲ್ಲಾಹ್" ಎಂದು ಹೇಳುವುದು. ❖ ರೋಗಿಯಾದರೆ ಸಂದರ್ಶಿಸುವುದು. ❖ ಮರಣ ಹೊಂದಿದರೆ ಸಂದರ್ಶಿಸಿ ಮಯ್ಯಿತ್ ಸಂಸ್ಕರಣೆಯಲ್ಲಿ ಪಾಲ್ಗೊಳ್ಳುವುದು.



وَاتَّقُوا يَوْمًا تُرْجَعُونَ فِيهِ إِلَى اللَّهِ ۖ ثُمَّ تُوَفَّىٰ كُلُّ نَفْسٍ مَا كَسَبَتْ وَهُمْ لَا يُظْلَمُونَ ﴿٢٨١﴾

ನೀವು ಅಲ್ಲಾಹನ ಕಡೆಗೆ ಮರಳಿಸಲ್ಪಡುವ (ಆ) ದಿನವನ್ನು ಭಯಪಡಿರಿ. ಅಂದು ಪ್ರತಿಯೊಬ್ಬನಿಗೂ ಅವನು ಗಳಿಸಿದುದನ್ನು (ಅದರ ಪ್ರತಿಫಲವನ್ನು) ನೆರವೇರಿಸಿ ಕೊಡಲಾಗುವುದು ಮತ್ತು ಅವರು ಅಕ್ರಮಿಸಲ್ಪಡಲಾರರು. ಕುರ್‌ಆನ್ 2x181

Allah's Messenger ﷺ said.

*The best among you are those who have the* ***best manners*** *and* ***character.***

ಪ್ರವಾದಿ (ಸ) ಹೇಳಿರುವರು: ಒಳ್ಳೆಯ ಗುಣನಡತೆ ಹಾಗೂ ಸಂಸ್ಕೃತಿ ಉಳ್ಳವನೇ ನಿಮ್ಮಲ್ಲಿ ಅತ್ಯುತ್ತಮನು. (ಬುಖಾರಿ)





www.islamiconlineuniversity.com

اهْدِنَا الصِّرَاطَ الْمُسْتَقِيمَ

Guide us to the straight path

ನೀನು ನಮ್ಮನ್ನು ನೇರವಾದ ಮಾರ್ಗದಲ್ಲಿ ಮುನ್ನಡೆಸು. ಕುರ್‌ಆನ್ 1x6



**ALLAH**

**MADE YOU A MUSLIM BECAUSE HE WANTS TO SEE YOU IN JANNAH, ALL YOU'VE TO DO IS PROVE THAT YOU'RE WORTHY OF IT.**



سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು

# ಒಂದು ಅವಲೋಕನ ಭಾಗ - 11



## ಶಿರವಸ್ತ್ರ: ದುರ್ಬಲ ವರದಿಗಳು

✍ ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

ನಮಾಝ್‌ನಲ್ಲಿ ತಲೆ ಮುಚ್ಚುವುದು ಪುಣ್ಯ ಕರ್ಮ ಎಂದು ಮುಗ್ಧ ಸುನ್ನಿಗಳು ನಂಬುತ್ತಾರೆ. ತಲೆ ತೆರೆದು ಆರಾಧನಾ ಕರ್ಮಗಳಲ್ಲಿ ಪಾಲ್ಗೊಳ್ಳುವವರನ್ನು ಅವಮಾನದಿಂದ ನೋಡುವುದಕ್ಕೂ ಈ ನಂಬಿಕೆಯೇ ಮೂಲ ಕಾರಣ.

ವಾಸ್ತವದಲ್ಲಿ ಅಲ್ಲಾಹನಾಗಲೀ, ಅವನ ಪ್ರವಾದಿ(ಸ)ರವರಾಗಲೀ ಶಿರವಸ್ತ್ರ ಧರಿಸುವುದಕ್ಕೆ ಪುಣ್ಯವಿದೆ ಎಂದು ಎಲ್ಲೂ ಹೇಳಿಲ್ಲ. ಅಷ್ಟೇ ಏಕೆ, ನಮಾಝ್‌ನ ವಿಧಿ-ವಿಧಾನಗಳನ್ನು ವಿವರಿಸುವ ಫಿಕ್ಹ್ ಗ್ರಂಥಗಳಲ್ಲೂ ಶಿರವಸ್ತ್ರ ತೊಡುವುದು ಸುನ್ನತ್ ಎಂಬ ಪ್ರಸ್ತಾಪವಿಲ್ಲ. ಕಾರಣ ಶಿರವಸ್ತ್ರ ಧಾರಣೆಯ ಮಹತ್ವದ ಕುರಿತ ಸರ್ವ ಹದೀಸ್‌ಗಳು ದುರ್ಬಲ.

ಆದರೂ ಸುನ್ನಿಗಳ ಮಧ್ಯೆ ವ್ಯಾಪಕವಾಗಿ ಪ್ರಚಾರ ಪಡೆದಿರುವ "ಫತ್ಹುಲ್ ಮುಈನ್" ನಂತಹ ಗ್ರಂಥಗಳು ಮುಂಡಾಸಿನ ಮಹತ್ವಗಳನ್ನು ಸಾರುತ್ತದೆ. ಫತ್ಹುಲ್ ಮುಈನ್ ಎಂಬ ಗ್ರಂಥದ ಜುಮುಆದ ಅಧ್ಯಾಯದಲ್ಲಿ ಶಿರವಸ್ತ್ರ ಧರಿಸುವುದರ ಮಹತ್ವವನ್ನು ಸಾರುವ ಹದೀಸ್ ಒಂದು ಹೀಗಿದೆ: "ಪ್ರವಾದಿ(ಸ)ರು ಹೇಳಿದರು: ಶುಕ್ರವಾರ ದಿನ ಮುಂಡಾಸು ಧಾರಿಗಳ ಮೇಲೆ ಅಲ್ಲಾಹು ಮತ್ತು ಮಲಕ್‌ಗಳು ಸಲಾತ್ ಹೇಳುವರು". (ತ್ವಬ್ರಾನಿ)

ಈ ಹದೀಸ್‌ನ ಕುರಿತು ಇಮಾಮ್ ಸುಯೂತಿ ಹೇಳುವುದು ನೋಡಿ "ಅಯ್ಯೂಬ್ ಬಿನ್ ಮದ್‌ರಕ್ ಎಂಬ ಏಕಾಂಗಿಯಿಂದ ವರದಿಯಾದ ಈ ಹದೀಸ್‌ಗೆ ಯಾವುದೇ ಅಡಿಪಾಯವಿಲ್ಲ, ಇಮಾಮ್ ಅಝ್‌ದಿ(ರ)ರವರು ಈತನ ಹದೀಸ್ ಕೃತಕ ನಿರ್ಮಿತ ಎಂದು ಹೇಳಿದ್ದಾರೆ. ಮಹ್‌ಯ ಕೂಡಾ ಆ ವ್ಯಕ್ತಿಯ ಕುರಿತು ಆಕ್ಷೇಪವೆತ್ತಿದ್ದಾರೆ". (ಅಲ್ಲಾಲಿ 2-27)

ಇಬ್ನ್ ಮುಈನ್(ರ) ಎಂಬವರು ಪ್ರಸ್ತುತ ವರದಿಗಾರನ ಕುರಿತು ಆತ ಹದೀಸ್ ಕ್ಷೇತ್ರದಲ್ಲಿ ನಗಣ್ಯ ಎಂದು ಅಭಿಪ್ರಾಯಪಟ್ಟಿದ್ದಾರೆ. ಇಮಾಮ್ ಅಬೂ ಹಾತ್ತಿಮ್ ಮತ್ತು ನಸಾಯಿ ಕೂಡಾ ಇದೇ ಅಭಿಪ್ರಾಯ ಹೊಂದಿದ್ದಾರೆ. ಈತ ಕೃತಕ ಹದೀಸ್‌ಗಳ ನಿರ್ಮಾಪಕ ಎಂದು ಇಮಾಮ್ ಇಬ್ನು ಹಿಬ್ಬಾನ್ ಹೇಳುತ್ತಾರೆ.(ಮಿಝಾನ್)

ಶಿರವಸ್ತ್ರ ಎಂಬ ಪದದಲ್ಲಿ ಟೋಪಿ, ರುಮಾಲು, ಮುಂಡಾಸು ಇವೆಲ್ಲಾ ಸೇರಿಕೊಂಡಿವೆ. ಕೇವಲ ಟೋಪಿ ಮಾತ್ರ ಧರಿಸುವವರು ಕೆಲವರಾದರೆ ಬೋಳು ತಲೆಗೆ ಮುಂಡಾಸು ಮಾತ್ರ ಸುತ್ತಿಕೊಳ್ಳುವವರು ಬೇರೆ ಕೆಲವರು. ಇವೆರಡರ ಮಧ್ಯೆ ಟೋಪಿ ಇಟ್ಟು ಅದರ ಮೇಲೆ ಮುಂಡಾಸು ತೊಡುವುದು ತೃತೀಯ ವಿಧಾನ. ಅಂದರೆ ತಲೆಗೆ ಟೋಪಿ ಹಾಕಿ ಅದರ ಮೇಲೊಂದು ಪೇಟ ಸುತ್ತಿಕೊಳ್ಳುವುದು, ಅನೇಕ ಹಿರಿಯ ಸುನ್ನೀ ಪಂಡಿತರೂ ಈ ವಿಧಾನವನ್ನು ಬಹಳ ಹಿಂದಿನಿಂದಲೇ ಅಳವಡಿಸಿಕೊಂಡಿರುವುದು ಕಂಡು ಬರುತ್ತದೆ.

ಈ ವಿಧಾನವನ್ನು ಅನುಸರಿಸಲು ಪ್ರೇರಕ ಶಕ್ತಿಯಾಗಿರುವ ಒಂದು ಹದೀಸ್ ಹೀಗಿದೆ: "ರುಕಾನತ್(ರ)ರವರಿಂದ ಪ್ರವಾದಿ(ಸ) ಅವರು ಹೇಳಿದರು. ನಮ್ಮ ಮತ್ತು ಬಹುದೈವಾರಾಧಕರ ನಡುವಿನ ವ್ಯತ್ಯಾಸವೆಂದರೆ ಟೋಪಿಯ ಮೇಲೆ ಮುಂಡಾಸು ಧರಿಸುವುದಾಗಿದೆ. (ತುರ್ಮುದ್ಸಿ)

ಈ ಹದೀಸ್ ವರದಿ ಮಾಡಿರುವ ಇಮಾಮ್ ತುರ್ಮುದ್ಸಿ ಅವರೇ ಇದು ಅಸ್ಥಿರವಾದ ಹದೀಸ್ ಎಂದು ಒಪ್ಪಿಕೊಂಡಿದ್ದಾರೆ. ಇಮಾಮ್ ಸುಯೂಥಿ ಇದನ್ನು ಕೃತಕ ಹದೀಸ್‌ಗಳ ಸಾಲಿಗೆ ಸೇರಿಸುತ್ತಾರೆ. (ಅಲ್ಲಾಲಿ 2-260)

ಸುನ್ನೀ ವಿಶ್ವಾಸದ ಪ್ರಕಾರ ಈ ಹದೀಸ್‌ನಿಂದ ಒಂದು ಸತ್ಯವಂತೂ ವೇದ್ಯವಾಗುತ್ತದೆ.

ಅದೇನೆಂದರೆ ಮುಸ್ಲಿಮರಂತೆ ಪ್ರವಾದಿ(ಸ)ರವರ ಸಮಕಾಲೀನರಾದ ಅಬೂಜಹ್ಲ್ ಮತ್ತು ಅವನ ಬೆಂಬಲಿಗರಾದ ಮುಶ್ರಿಕರೂ ಮುಂಡಾಸು ಧರಿಸುತ್ತಿದ್ದರು ಎನ್ನುವುದು. ಇದು ಸಲಫಿಗಳು ಬಹು ಹಿಂದಿನಿಂದಲೂ ಜನರಿಗೆ ಬೋಧಿಸಿದ್ದಾರೆ.

ಮುಂಡಾಸಿನ ಮಹತ್ವವನ್ನು ಸಾರುವ ಮತ್ತೊಂದು ಹದೀಸ್ ನೋಡಿ:

"ಪ್ರವಾದಿ(ಸ) ಅವರು ಹೇಳಿದರು "ನೀವು ಮುಂಡಾಸು ಧರಿಸಿರಿ. ಅದರಿಂದ ನಿಮ್ಮ ವಿವೇಕ ವೃದ್ಧಿಸುವುದು. (ತ್ವಬ್ರಾನಿ, ಹಾಕಿಂ)

ಇಮಾಮ್ ಬುಖಾರಿ(ರ) ಅವರೇ ಈ ಹದೀಸ್ ದುರ್ಬಲ ಎಂದಿದ್ದರೆ, ಅದು ಅವರಿಗೆ ಸಂಭವಿಸಿದ ತಪ್ಪು ಎಂದು ಇಬ್ನು ಹಜರಿಲ್ ಅಸ್ಖಲಾನಿ(ರ) ಫತ್ಹುಲ್ ಬಾರಿಯಲ್ಲಿ ಸ್ಪಷ್ಟಪಡಿಸಿದ್ದಾರೆ. (13-226)

ಮುಂಡಾಸಿನ ಮಹತ್ವವನ್ನು ಸಾರುವ ಇನ್ನೊಂದು ಹದೀಸ್ ಹೀಗಿದೆ "ಪ್ರವಾದಿ(ಸ) ಹೇಳಿದರು: "ನೀವು ಮುಂಡಾಸು ಧರಿಸುವುದನ್ನು ಖಾಯಂಗೋಳಿಸಿ, ಖಂಡಿತವಾಗಿಯೂ ಅದು ಮಲಕ್‌ಗಳ ಲಾಂಛನವಾಗಿದೆ. (ಬೈಹಕಿ)

ಇದರ ಸನದ್‌ನಲ್ಲಿರುವ ಮುಹಮ್ಮದ್ ಬಿನ್ ಫರ್ಜಾನ್ ಎಂಬ ವ್ಯಕ್ತಿಯ ಬಗ್ಗೆ ಮುಹದ್ದಿಸ್‌ಗಳ ಮಧ್ಯೆ ಆರೋಪವಿದೆ. ಈತ ಕೆಲವೊಮ್ಮೆ ಊಹೆಯ ಆಧಾರದಲ್ಲಿ ಹದೀಸ್ ಉದ್ಧರಿಸುವ ವ್ಯಕ್ತಿ ಎನ್ನುವುದೇ ಆಕ್ಷೇಪ. (ತಕ್‌ರೀಬ್ 502)

ಅದೇ ರೀತಿ ಇದರ ಪರಂಪರೆಯಲ್ಲಿರುವ ಮತ್ತೊಬ್ಬ ಅಸ್‌ವಸ್ ಬಿನ್ ಹಕೀಂ ಎಂಬ ವ್ಯಕ್ತಿಯ ಕುರಿತು ಇಮಾಮ್ ಇಬ್ನು ಹಜರ್ ಹೇಳುತ್ತಾರೆ: ಈತನ ನೆನಪಿನ ಶಕ್ತಿ ದುರ್ಬಲ". (ತಖ್‌ರೀಬ್, 95)

ಅಷ್ಟೇ ಅಲ್ಲ, ಇಮಾಮ್ ಇಬ್ನು ಮದೀನಿ ಇವನು ನಗಣ್ಯನಾಗಿರುವುದಲ್ಲದೆ ಇವನಿಂದ ಯಾವುದೇ ಹದೀಸ್ ಬರೆದುಕೊಳ್ಳಬಾರದು ಎಂದು ಎಚ್ಚರಿಸಿದ್ದಾರೆ. (ಮೀಝಾನ್ 1-167)

ನಮಾಝ್‌ನ ವೇಳೆ ಪ್ರತ್ಯೇಕವಾಗಿ ಮುಂಡಾಸು ಧರಿಸುವುದಕ್ಕೆ ಕೆಲವರು ವಿಶೇಷ ಕಾಳಜಿ ವಹಿಸುತ್ತಾರೆ. ಮುಂಡಾಸು ಧರಿಸಿ ನಿರ್ವಹಿಸುವ ನಮಾಝ್‌ಗೆ ಹೆಚ್ಚುವರಿ ಪುಣ್ಯವಿದೆ ಎಂಬ ನಂಬಿಕೆಯೇ ಇದಕ್ಕೆ ಕಾರಣ.

ಇದೂ ಕೂಡಾ ಒಂದು ದುರ್ಬಲ ಹದೀಸ್‌ನ ಫಲಶ್ರುತಿ, ಇಬ್ನು ಉಮರ್(ರ) ಅವರಿಂದ ಉಲ್ಲೇಖ. ಪ್ರವಾದಿ(ಸ)ರವರು ಹೇಳಿದರು "ಮುಂಡಾಸು ಧರಿಸಿ ನಿರ್ವಹಿಸುವ ನಮಾಝ್ ಮುಂಡಾಸು ಧರಿಸದೆ ಮಾಡುವ ನಮಾಝ್‌ಗಿಂತ 25 ಪಟ್ಟು ಅಧಿಕ ಶ್ರೇಷ್ಟಕರ. (ಉಲ್ಲೇಖ: ಇಬ್ನು ಅಸಾಕಿರ್, ದೈಲಮಿ)

(11ನೇ ಪುಟಕ್ಕೆ)

# ಧಾರ್ಮಿಕ ಪ್ರಶ್ನೋತ್ತರಗಳು

### ಕತ್ತರಿಸಲ್ಪಟ್ಟ ಅಂಗಾಂಗ

- ಮನುಷ್ಯ ದೇಹದಲ್ಲಿ ಹೆಚ್ಚುವರಿಯಾಗಿ ಬೆಳೆದ ಬೆರಳು ಮುಂತಾದ ಅಂಗಾಂಗಗಳನ್ನು ಕತ್ತರಿಸಿ ತೆಗೆದರೆ ಅದನ್ನು ಏನು ಮಾಡಬೇಕು?
  ಇತರ ತ್ಯಾಜ್ಯ ವಸ್ತುಗಳೊಂದಿಗೆ ಬಿಸಾಡಬಹುದೇ? ಅಥವಾ ನೆಲದಲ್ಲಿ ಹೂಳಬೇಕೇ?

❖ ದೇಹದಿಂದ ಕತ್ತರಿಸಿ ತೆಗೆಯಲಾದ ಅಂಗಾಗಕ್ಕೆ ಮಾನವ ಶರೀರದ ವಿಧಿ ಅನ್ವಯಿಸಲಾರದು, ಅದನ್ನು ಒಂದೋ ತ್ಯಾಜ್ಯ ವಸ್ತುಗಳೊಡನೆ ಬಿಸಾಡಬಹುದು, ಇಲ್ಲವೇ ನೆಲದಲ್ಲಿ ಹೂತು ಹಾಕಬಹುದು, ನೆಲದಲ್ಲಿ ಹೂಳುವುದೇ ಉತ್ತಮ.

### ಯಾತ್ರಿಕನ ಸುನ್ನತ್ ನಮಾಝ್

- ನಾನು ಹೆಚ್ಚಿನ ವೇಳೆ ಯಾತ್ರೆಯಲ್ಲಿರುತ್ತೇನೆ. ನನಗೊಂದು ಸಂದೇಹ. ಯಾತ್ರಿಕನಿಗೆ ರವಾತಿಬ್ ಸುನ್ನತ್ ನಿರ್ವಹಿಸದಿರುವುದೇ ಉತ್ತಮ ಎಂದು ಹೇಳುವುದನ್ನು ಕೇಳಿದ್ದೇನೆ. ಇದು ನಿಜವೇ? ಪ್ರವಾದಿ ಚರ್ಯೆಯಲ್ಲಿ ಇದಕ್ಕೆ ಆಧಾರವಿದೆಯೇ? ತಿಳಿಸಿ.

❖ ಹೌದು, ಯಾತ್ರೆಯಲ್ಲಿ ರವಾತಿಬ್ ನಮಾಝ್‌ಗಳನ್ನು ತೊರೆಯುವುದು ಅಪೇಕ್ಷಣೀಯ. ಇದಕ್ಕೆ ಸುನ್ನತ್‌ನ ಆಧಾರವಿದೆ. ಪ್ರವಾದಿ(ಸ)ರವರು ಸುಬ್‌ಹಿನ ರವಾತಿಬ್ ಮತ್ತು ವಿತ್ರ್ ನಮಾಝ್‌ಗಳನ್ನು ಹೊರತು ಪಡಿಸಿ ಉಳಿದೆಲ್ಲ ರವಾತಿಬ್‌ಗಳನ್ನು ಯಾತ್ರೆಯಲ್ಲಿ ತೊರೆಯುತ್ತಿದ್ದರೆಂದು ಇಬ್ನ್ ಉಮರ್(ರ) ರವರಿಂದ ಉಲ್ಲೇಖಿಸಲ್ಪಟ್ಟ ಹದೀಸ್‌ನಲ್ಲಿದೆ. ಈ ಹದೀಸ್‌ನ ಆಧಾರದಲ್ಲಿ ಯಾತ್ರಿಕನಿಗೂ ಫಜ್ರ್ ಸುನ್ನತ್ ಮತ್ತು ವಿತ್ರ್ ನಮಾಝ್ ಎಂದಿನಂತೆ ಅನ್ವಯಗೊಳ್ಳಲಿದೆ. ಅದೇ ರೀತಿ ಕಾರ್ಯ ಕಾರಣ ಸಂಬಂಧವಿರುವ ವುದೂವಿನ ಸುನ್ನತ್, ತ್ವವಾಫ್‌ನ ಸುನ್ನತ್, ಳುಆ ನಮಾಝ್, ತಹಜ್ಜುದ್ ಮುಂತಾದ ನಮಾಝ್‌ಗಳನ್ನು ಪ್ರವಾದಿ(ಸ)ರವರು ಯಾತ್ರೆಯಲ್ಲೂ ಉಪೇಕ್ಷಿಸುತ್ತಿರಲಿಲ್ಲ ಎಂದು ಹದೀಸ್‌ಗಳಿಂದ ಸಾಬೀತಾಗಿದೆ.

- ಅರ್ಧ ತೋಳಿನ ಅಂಗಿ (ಹಾಫ್ ಕೈ ಶರ್ಟ್) ಧರಿಸಿ ನಮಾಝ್ ನಿರ್ವಹಿಸುವುದಕ್ಕೆ ವಿರೋಧವಿದೆಯೇ?

❖ ಕುರ್‌ಆನ್ ಮತ್ತು ಸುನ್ನತ್ ಪ್ರಕಾರ ಅರ್ಧ ತೋಳಿನ ಅಂಗಿ ಧರಿಸಿ ನಮಾಝ್ ನಿರ್ವಹಿಸುವುದಕ್ಕೆ ವಿರೋಧವಿಲ್ಲ. ಆದರೆ ನಮಾಝ್‌ನಲ್ಲಿ ಭುಜಗಳೆರಡು ತೆರೆದಿಡಬಾರದೆಂದು ಪ್ರವಾದಿ(ಸ)ರವರು ಪ್ರತ್ಯೇಕವಾಗಿ ಸೂಚಿಸಿದ್ದಾರೆ. ಕೈಗಳು ಪೂರ್ಣವಾಗಿ ಮರೆ ಮಾಚಬೇಕಾದುದು ನಮಾಝ್‌ನ ನಿಬಂಧನೆಯಲ್ಲದಿದ್ದರೂ ಸಭ್ಯ ಮತ್ತು ಸೂಕ್ತವಾದ ಉಡುಪಿನಲ್ಲಿ ನಮಾಝ್‌ಗೆ ಪ್ರವೇಶಿಸುವುದು ಉತ್ತಮ.

### ಪುರುಷ ವೈದ್ಯರಿಂದ ಚಿಕಿತ್ಸೆ

- ಮಹಿಳೆಯರು ಪುರುಷ ವೈದ್ಯ(Mane Doctor)ರಿಂದ ಚಿಕಿತ್ಸೆ ಪಡೆಯುವುದು ತಪ್ಪೇ? ಏಕೆಂದರೆ ಕೆಲವರು ಇದನ್ನು ತೀವ್ರವಾಗಿ ವಿರೋಧಿಸುತ್ತಾರೆ.

(ನೇ ಪುಟಕ್ಕೆ)

# ಧಾರ್ಮಿಕ ಪ್ರಶ್ನೋತ್ತರಗಳು

(5ನೇ ಪುಟದಿಂದ)

❖ ಸೂಕ್ತವಾದ ಮಹಿಳಾ ವೈದ್ಯರು ಇಲ್ಲದೇ ಹೋದಾಗ ಪುರುಷ ವೈದ್ಯರಿಂದ ಚಿಕಿತ್ಸೆ ಪಡೆಯುವುದು ತಪ್ಪಲ್ಲ. ಇದು ತೀರಾ ಸರಿ ಅಲ್ಲ ಎಂದು ವಾದಿಸುವುದು ಸಂಪ್ರದಾಯಸ್ಥರ ನಿಲುವೇ ಹೊರತು ಇಸ್ಲಾಮಿನ ನಿಯಮವಲ್ಲ. ಕಾರಣ ಇಸ್ಲಾಮ್ ಜನರ ಆರೋಗ್ಯವನ್ನು ಹದಗೆಡಿಸುವ ಸಂಕುಚಿತ ಧರ್ಮವಲ್ಲ ಮತ್ತು ಕೆಲವು ರೋಗಗಳಿಗೆ ತಕ್ಷಣದ ಚಿಕಿತ್ಸೆಯ ಅಗತ್ಯವೂ ಇರುತ್ತದೆ. ಈ ಎಲ್ಲಾ ಸಂದರ್ಭಗಳಲ್ಲಿ ಪುರುಷ ವೈದ್ಯರನ್ನು ಕಂಡು ಚಿಕಿತ್ಸೆ ಪಡೆಯುವುದಕ್ಕೆ ವಿರೋಧವಿಲ್ಲ.

● ಮಹಿಳೆಯರು ತಲೆಗೂದಲು ಕತ್ತರಿಸಬಹುದೇ? ಏನಿದರ ಧಾರ್ಮಿಕ ವಿಧಿ?

❖ ಮಹಿಳೆಯರು ತಲೆಗೂದಲು ಕತ್ತರಿಸಬೇಕಾದ ಅಗತ್ಯವಿಲ್ಲ. ರೋಗ ಮತ್ತಿತರ ಕಾರಣಕ್ಕೆ ಕತ್ತರಿಸುವುದಾದರೆ ಅದನ್ನು ವಿರೋಧಿಸುವಂತಿಲ್ಲ. ಆದರೆ ಇಂದಿನ ಆಧುನಿಕ ಮಹಿಳೆಯರು ಫ್ಯಾಷನ್‌ನ ಸಂಕೇತವಾಗಿ ತಲೆಗೂದಲು ಕತ್ತರಿಸುವುದಿದೆ. ಬಳಿಕ ಅದನ್ನು ಇತರರ ಮುಂದೆ ಪ್ರದರ್ಶಿಸಲು ಶಿರವಸ್ತ್ರ ಹಾಕದೆ ತಲೆ ತೆರೆದೇ ನಡೆದಾಡುತ್ತಾರೆ. ಇದು ಶರೀಅತ್ ಪ್ರಕಾರ ಅಪರಾಧ. ಇದಕ್ಕಿಂತ ಹೇಸಿಗೆಯ ವಿಚಾರವೆಂದರೆ ಗಂಡಸರ ಹೇರ್ ಸ್ಟೈಲ್ ವಿಧಾನವನ್ನು ಅನುಸರಿಸುವುದು, ವೇಷ-ಭೂಷಣಗಳಲ್ಲಿ ಮಹಿಳೆಯರು ಪುರುಷರನ್ನು ಹಾಗೂ ಪುರುಷರು ಮಹಿಳೆಯರನ್ನು ಅನುಕರಿಸುವುದು ನಿಷಿದ್ಧ. ಅಂತಹ ಜನರನ್ನು ಪ್ರವಾದಿ(ಸ)ರು ಶಪಿಸಿದ್ದಾರೆ.

-ಶೈಖ್ ಮಹ್ಮೂದ್ ಅಹ್ಮದ್, ಮೀರ್‌ಪುರಿ.

**ಧರ್ಮ ಪ್ರಚಾರದಲ್ಲಿ ಮಹಿಳೆಯರ ಪಾತ್ರ**

● ಮಹಿಳೆಯರು ಧರ್ಮ ಪ್ರಚಾರ ಕಾರ್ಯದಲ್ಲಿ ತೊಡಗುವುದರ ಕುರಿತು ಇಸ್ಲಾಮಿನ ವಿಧಿಯೇನು? ವಿರೋಧವಿದೆಯೇ? ತಿಳಿಸಿ.

❖ ಇಸ್ಲಾಮಿನ ಪ್ರಚಾರ, ಒಳಿತನ್ನು ಆದೇಶಿಸುವುದು. ಕೆಡುಕು ತಡೆಯುವುದು ಇತ್ಯಾದಿ ವಿಷಯದಲ್ಲಿ ಮಹಿಳೆಯು ಪುರುಷ ಸಮಾನಳಾಗಿದ್ದಾಳೆ. ಇದು ಕುರ್‌ಆನ್ ಮತ್ತು ಸುನ್ನತ್‌ನಿಂದ ವೇದ್ಯವಾದ ಸಂಗತಿ. ಮಹಿಳೆಯರು ಇಸ್ಲಾಮ್ ನಿರ್ದೇಶಿಸಿದ ವಸ್ತ್ರ ಸಂಹಿತೆ ಪಾಲಿಸಿಕೊಂಡು ಜನರನ್ನು ಒಳಿತಿನೆಡೆಗೆ ಆಹ್ವಾನಿಸುವುದು, ಕೆಡುಕಿನ ಕುರಿತು ಜನಜಾಗೃತಿ ಮೂಡಿಸುವುದು ಅಲ್ಲಾಹನ ಧರ್ಮದ ಬೋಧನೆಯ ಪ್ರಧಾನ ಭಾಗ. ಇತರರು ಆಕೆಯನ್ನು ಅವಮಾನಿಸಿದರೂ ಈ ದೌತ್ಯ ನಿರ್ವಹಣೆಯಿಂದ ಹಿಂಜರಿಯದೆ ಸಹನೆಯಿಂದ ಮುಂದುವರಿಯಬೇಕು. ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ಗಂಡು-ಹೆಣ್ಣು ಬೆರೆಯುವ ವೇದಿಕೆಗಳಿಂದ ಆಕೆ ದೂರ ನಿಲ್ಲಬೇಕು. ನಿಷಿದ್ಧವಾದ ಎಲ್ಲಾ ಕಾರ್ಯಗಳಿಂದಲೂ ವಿಮುಕ್ತವಾದ ರೀತಿಯಲ್ಲಿ ಧರ್ಮ ಪ್ರಚಾರ ಕಾಯಕ ಕೈಗೊಳ್ಳಬೇಕಾದುದು ಅತ್ಯವಶ್ಯಕ. ಮಹಿಳೆಯರು ಪುರುಷರಿಗೆ ಬೋಧನೆ ನೀಡುವುದಾದರೆ ಪರ್ದಾ ನಿಯಮವನ್ನು ಉಲ್ಲಂಘಿಸದಂತೆ ಎಚ್ಚರ ವಹಿಸಬೇಕು. ಜನರನ್ನು ಆಕರ್ಷಿಸುವಂತಹ ಪರ್ದಾ ಅಥವಾ ಇನ್ನಿತರ ವಸ್ತ್ರ ಸಂಹಿತೆ ರೂಢಿಸಿಕೊಳ್ಳಬಾರದು. ಸೌಂದರ್ಯ ಪ್ರದರ್ಶನ, ಪುರುಷ ಸಮಾಜವನ್ನು ಆಕರ್ಷಿಸುವಂತಹ ನಯ ನುಡಿಗಳನ್ನು ತ್ಯಜಿಸಬೇಕು. ಒಟ್ಟಿನಲ್ಲಿ ಮಹಿಳೆ ತನ್ನ ಶೀಲ ಮತ್ತು ಧರ್ಮದ ನಿಯಮವನ್ನು ಕಳಂಕಗೊಳಿಸದ ರೀತಿಯಲ್ಲಿ ಇಸ್ಲಾಮೀ ಪ್ರಬೋಧನಾ ಕ್ಷೇತ್ರದಲ್ಲಿ ಸಕ್ರಿಯವಾಗಿ ಕಾರ್ಯಾಚರಿಸುವುದಕ್ಕೆ ಯಾವುದೇ ವಿರೋಧವಿಲ್ಲ.

-ಇಬ್ನು ಬಾಝ್

# ಸರ್ವ ಧರ್ಮ ಗ್ರಂಥಗಳು ಸಾರಿದ ಏಕದೇವಾರಾಧನಾ ತತ್ವದೆಡೆಗೆ ಮನುಷ್ಯ ಮನಸ್ಸುಗಳು ಮರಳಲಿ

(ಮೊದಲ ಪುಟದಿಂದ)

ಶ್ಲೋಕಗಳು ಇತರ ವೇದಗಳಲ್ಲೂ ಇವೆ. (ಶ್ವೇತಾ ಶತರೋಪನಿಷತ್ 3:1-3:19-6:5, ಮುಂಡಕೋಪನಿಷತ್ 2:2:11, ಕಠೋಪನಿಷತ್ 1:2, 22,23)

ಬೈಬಲ್‌ನಲ್ಲೂ ಇದೇ ರೀತಿ ಕಾಣಬಹುದಾಗಿದೆ: "ಕರ್ತನು ಹೇಳುತ್ತಾನೆ, ಸರ್ವಶಕ್ತನಾದ ದೇವನು ನಾನೇ. ನೀನು ನನ್ನ ಮುಂದಿನಿಂದ ನಡೆ." (ಆದಿಕಾಂಡ 17:1)

ಓ ಇಸ್ರಾಯೇಲ್ ಕೇಳು, ನಮ್ಮ ದೇವನಾದ ಕರ್ತನು ಏಕೈಕ ಕರ್ತನಾಗಿದ್ದಾನೆ. ನಿನ್ನ ದೇವನಾದ ಕರ್ತನನ್ನು ಪೂರ್ಣ ಹೃದಯದೊಂದಿಗೆ, ಪೂರ್ಣ ಆತ್ಮದೊಂದಿಗೆ ಮತ್ತು ಪೂರ್ಣ ಶಕ್ತಿಯೊಂದಿಗೆ ಪ್ರೀತಿಸಬೇಕು. (ಮಾರ್ಕ : 12:28-30) ಇದೇ ರೀತಿಯ ಇನ್ನಷ್ಟು ಪುರಾವೆಗಳು ಬೈಬಲ್‌ನಲ್ಲಿವೆ. ಇದಕ್ಕೆ ವಿರುದ್ಧವಾದ ತ್ರಿಯೇಕತ್ವ ವಿಶ್ವಾಸವು ಆಮೇಲೆ ಹುಟ್ಟಿಕೊಂಡದ್ದಾಗಿದೆ.

ಸಕಲ ಪ್ರವಾದಿಗಳು ಬೋಧಿಸಿದ್ದು ಏಕದೇವಾರಾಧನಾ ತತ್ವವನ್ನಾಗಿದೆ. ಕುರ್‌ಆನ್‌ನಲ್ಲಿ ಅಲ್ಲಾಹನು ಹೇಳುವುದನ್ನು ನೋಡಿರಿ: " ನಾನು ಜಿನ್ನ್ ಹಾಗೂ ಮನುಷ್ಯರನ್ನು ಸೃಷ್ಟಿಸಿದ್ದು ನನ್ನನ್ನು ಮಾತ್ರ ಆರಾಧಿಸಲಿಕ್ಕಾಗಿ ವಿನಾಃ (ಬೇರಾವುದಕ್ಕೂ) ಆಗಿರಲಿಲ್ಲ. " (ಕುರ್‌ಆನ್ 51:56) ಈ ಸೂಕ್ತದ ಅರ್ಥವೇನೆಂದರೆ ಜಿನ್ನ್ ಹಾಗೂ ಮಾನವರನ್ನು ಸೃಷ್ಟಿಸಿ ಪೋಷಿಸುತ್ತಿರುವ ಅಲ್ಲಾಹನನ್ನು ಮಾತ್ರ ಪೂಜಿಸಬೇಕು ಮತ್ತು ಇತರ ಪೂಜ್ಯರನ್ನು ತಿರಸ್ಕರಿಸಬೇಕು ಎಂದಾಗಿದೆ.

ಆರಾಧನೆ ಎಂಬ ಪದದ ವ್ಯಾಪ್ತಿಗೊಳಪಟ್ಟ ಪ್ರಾರ್ಥನೆ, ಸಹಾಯಾರ್ಥನೆ, ಹರಕೆ, ಬಲಿ ಮುಂತಾದ ಕರ್ಮಗಳೆಲ್ಲವೂ ಏಕೈಕನಾದ ಅಲ್ಲಾಹನಲ್ಲಿ ಸಮರ್ಪಿಸಿ, ಅಲ್ಲಾಹನಲ್ಲಿ ಮಾತ್ರವೇ ಪೂರ್ಣ ಭರವಸೆಯಿಟ್ಟು ಬದುಕನ್ನು ಸಾರ್ಥಕಗೊಳಿಸಿದವನೇ ನಿಜವಾದ ಮುಸ್ಲಿಮ್. ಇದು ಭೂಮಿಗೆ ಬಂದ ಸಕಲ ಪ್ರವಾದಿಗಳು ಕಲಿಸಿದ ಜೀವನ ರೀತಿಯಾಗಿದೆ. ವಿಗ್ರಹ, ದರ್ಗ, ಜಿನ್ನ್, ಮಲಕ್ ಮತ್ತು ಸ್ವಯಂ ಘೋಷಿತ ದೇವಮಾನವರಿಗೆ ಮಾಡುವ ಪೂಜೆ, ಪುರಸ್ಕಾರ, ಹರಕೆ, ಬಲಿ ಕರ್ಮಗಳು ಮತ್ತು ಅವರೊಡನೆ ಮಾಡುವ ಪ್ರಾರ್ಥನೆ ಸಹಾಯಾರ್ಥನೆಗಳೆಲ್ಲವೂ ಪುರೋಹಿತ ನಿರ್ಮಿತ ವಿಶ್ವಾಸಾಚಾರಗಳಾಗಿದ್ದು, ಈ ವಿಶ್ವಾಸಾಚಾರಗಳನ್ನು ಬದುಕಲ್ಲಿ ಅಳವಡಿಸಿಕೊಂಡವನು ಮುಶ್ರಿಕ್ ಅಥವಾ ಬಹು ದೇವಾರಾಧಕನಾಗಿ ಪರಲೋಕದಲ್ಲಿ ಶಾಶ್ವತ ನರಕ ವಾಸಿಯಾಗಿ ಜ್ವಲಿಸುವ ಅಗ್ನಿಯಲ್ಲಿ ಬೆಂದುವರಿಯುವವನು!

ಈ ಪರಮ ಸತ್ಯವನ್ನು ಜನ ಸಮೂಹಕ್ಕೆ ತಲುಪಿಸುವ ಸುದುದ್ದೇಶದಲ್ಲಿ ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್ 'ಪ್ರಾರ್ಥನೆ, ಸಹಾಯಾರ್ಥನೆ ಅಲ್ಲಾಹನೊಂದಿಗೆ ಮಾತ್ರ' ಎಂಬ ಧ್ಯೇಯ ವಾಕ್ಯದಡಿ ವರ್ಷಾವಧಿ ಅಭಿಯಾನವನ್ನು ಹಮ್ಮಿಕೊಂಡಿದೆ. ಅಲ್ಲಾಹನನ್ನು ಮಾತ್ರ ಆರಾಧಿಸುವ. ಅವನೊಡನೆ ಮಾತ್ರ ಪ್ರಾರ್ಥನೆ, ಸಹಾಯಾರ್ಥನೆ ಮಾಡುವ ಮತ್ತು ಅವನಲ್ಲಿ ಮಾತ್ರ ಭರವಸೆಯಿಡುವ ಸಹೋದರ, ಸಹೋದರಿಯರು ಮಾನವ ರಾಶಿಗೆ ಸೃಷ್ಟಿಕರ್ತನ ಸಂದೇಶವನ್ನು ತಲುಪಿಸುವ ಅಭಿಯಾನದಲ್ಲಿ ಪಾಲ್ಗೊಂಡು ಪಾರತ್ರಿಕ ಮೋಕ್ಷಕ್ಕೆ ಪಾತ್ರರಾಗಲು ತ್ವರೆ ಮಾಡಿರಿ. ●

# ಸಲಫಿ ಅಭಿಯಾನ ಮತ್ತು ಸಮ್ಮೇಳನದ ಸ್ವಾಗತ ಸಮಿತಿ

ಮಂಗಳೂರು: "ಪ್ರಾರ್ಥನೆ, ಸಹಾಯಾರ್ಥನೆ ಅಲ್ಲಾಹನೊಂದಿಗೆ ಮಾತ್ರ" ಎಂಬ ಧ್ಯೇಯವಾಕ್ಯದಡಿ ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್ ಹಮ್ಮಿಕೊಂಡಿರುವ ವರ್ಷಾವಧಿ ಅಭಿಯಾನ ಮತ್ತು ಅದರ ಅಂಗವಾಗಿ ಜನವರಿ 25 ಮತ್ತು 26ರಂದು ಮಂಗಳೂರಲ್ಲಿ ನಡೆಯಲಿರುವ ದ್ವಿದಿನ ಸಲಫಿ ಸಮ್ಮೇಳನದ ಸಿದ್ಧತೆಗಾಗಿ ಈ ಕೆಳಗಿನ ಸ್ವಾಗತ ಸಮಿತಿಯನ್ನು ರಚಿಸಲಾಗಿದೆ.

ಜ| ಅಬ್ದುಲ್ ರಹಿಮಾನ್ ಇಬ್ರಾಹೀಂ ಕತಾರ್ (ಅಧ್ಯಕ್ಷರು), ಯು.ಎನ್. ಅಬ್ದುಲ್ ರಝಾಕ್, ನಝೀರ್ ಅಹ್ಮದ್, ಡಾ| ಅಶ್ರಫ್ ಕಮ್ಮಾಡಿ, ರಿಝ್ವಾನ್ ಅಹ್ಮದ್ ಮೂಡಬಿದ್ರೆ, ಅಬ್ದುಲ್ ರಹಿಮಾನ್ ಉಪ್ಪಿನಂಗಡಿ, ಸಿ.ಎಂ. ಅಬ್ಬಾಸ್ ಉಚ್ಚಿಲ, ಹನೀಫ್ ಚೊಕ್ಕಬೆಟ್ಟು, ಅನ್ವರ್ ಬಜ್ಪೆ, ನಝೀರ್ ಸೂರಲ್ಪಾಡಿ, ಅಬ್ಬಾಸ್ ತಲಪಾಡಿ, ಮೂಸಾ ತಲಪಾಡಿ, ಅಬ್ದುಲ್ ಹಮೀದ್ ಪುತ್ತೂರು, ಅಬ್ದುಲ್ ರಝಾಕ್ ಬಬ್ಬುಗುಡ್ಡೆ, ಅಬ್ದುಲ್ಲಾ ಸುಳ್ಯ (ಉಪಾಧ್ಯಕ್ಷರು), ಅಹ್ಮದ್ ಅನ್ಸಾರ್ (ಪ್ರಧಾನ ಸಂಚಾಲಕರು), ಬಶೀರ್ ಅಹ್ಮದ್ ಶಾಲಿಮಾರ್ (ಸಹ ಸಂಚಾಲಕರು) ವಿವಿಧ ಉಪ ಸಮಿತಿಗಳ ಸಂಚಾಲಕರಾಗಿ ಈ ಕೆಳಗಿನವರನ್ನು ಆರಿಸಲಾಯಿತು. ಅಬೂಬಕರ್ ಪಾಂಡೇಶ್ವರ (ಹಣಕಾಸು), ಇಸ್ಮಾಯೀಲ್ ಶಾಫಿ(ಪ್ರಚಾರ), ಕೆ.ಎಂ. ಹನೀಫ್ (ಮೈಕ್, ಲೈಟ್ ಮತ್ತು ವೀಡಿಯೋ), ಮುಹಮ್ಮದ್ ಅಶ್ರಫ್ ಕುದ್ರೋಳಿ (ಚಪ್ಪರ ಮತ್ತು ವೇದಿಕೆ), ಶರ್ಫುದ್ದೀನ್ ದೇರೆಬೈಲ್ (ಅತಿಥೇಯ ಸಮಿತಿ), ಅಹ್ಮದ್ ಬಾವ ಕಣ್ಣೂರು (ಆಹಾರ), ರಿಯಾಝ್ ಅಹ್ಮದ್ (ಸ್ವಯಂ ಸೇವಕ ಸಮಿತಿ).




✍ ಪ್ರೊ ಪಿ. ಅಬ್ದುಲ್ಲ. ಕನ್ನಡಕ್ಕೆ: ಇಬ್‌ನು ಮೊಹಿದ್ದೀನ್

## ಇಸ್ತಿಖಾರ:

كَانَ رَسُولُ اللهِ ﷺ يُعَلِّمُنَا الإسْتِخَارَةَ فِى الأمُورِ كُلِّهَا كَمَا يُعَلِّمُنَا السُّورَةَ مِنَ القُرْآنِ، يَقُولُ : إذَا هَمَّ أحَدُكُمْ بالأمْرِ، فَلْيَرْكَعْ رَكْعَتَيْنِ مِنْ غَيْرِ الفَرِيضَةِ، ثم لِيَقُل: (اللّٰهُمَّ إنِّي أسْتَخِيرُكَ بِعِلْمِكَ، وَأسْتَقْدِرُكَ بِقُدْرَتِكَ، وَأسْألُكَ مِنْ فَضْلِكَ العَظِيمِ، فَإنَّكَ تَقْدِرُ وَلاَ أقْدِرُ، وَتَعْلَمُ وَلاَ أعْلَمُ، وَأنْتَ عَلاَّمُ الغُيُوبِ، اللّٰهُمَّ إنْ كُنْتَ تَعْلَمُ أنَّ هَذا الأمْرَ - وَتُسَمِّيهِ بِاسْمِهِ - خَيْرٌ لِي فِي دِينِي وَمَعَاشِي وَعَاقِبَةِ أمْرِي، وَعَاجِلِهِ وَآجِلِهِ، فَاقْدُرْهُ لِي وَيَسِّرْهُ لِي، ثُمَّ بَارِكْ لِي فِيهِ، وَإنْ كُنْتَ تَعْلَمُ أنَّ هَذَا الأمْرَ شَرٌّ لِي فِي دِينِي وَمَعَاشِي وَعَاقِبَةِ أمْرِي، وَعَاجِلِهِ وَآجِلِهِ، فَاصْرِفْهُ عَنِّي واصْرِفْنِي عَنْهُ، وَاقْدُرْ لِّي الخَيْرَ حَيْثُ كَانَ، ثُمَّ رَضِّنِي بِهِ). (البخاري)

ಕುರ್‌ಆನಿನ ಒಂದು ಸೂರಃವನ್ನು ಕಲಿಸಿ ಕೊಡುವ ರೀತಿಯಲ್ಲಿ ರಸೂಲ್(ಸ)ರು ನಮಗೆ ಎಲ್ಲಾ ವಿಷಯಗಳ ಇಸ್ತಿಖಾರತ್ ಕಲಿಸಿ ಕೊಡುತ್ತಿದ್ದರು. ಅವರು(ಸ) ಹೀಗೆ ಹೇಳುತ್ತಿದ್ದರು: "ನಿಮ್ಮಲ್ಲಿ ಯಾರಾದರೂ ಯಾವುದೇ ಕಾರ್ಯವನ್ನು ಮಾಡಲಿಚ್ಛಿಸುವುದಾದರೆ ಕಡ್ಡಾಯವಲ್ಲದ ಎರಡು ರಕಅತ್(ಸುನ್ನತ್) ನಮಾಝ್ ನಿರ್ವಹಿಸಿದ ಬಳಿಕ ಹೀಗೆ ಹೇಳಲಿ: ಓ ಅಲ್ಲಾಹ್, ನಿನ್ನ ಜ್ಞಾನದಿಂದ ನಾನು ನಿನ್ನೊಡನೆ ಒಳಿತನ್ನು ಯಾಚಿಸುತ್ತೇನೆ, ನಿನ್ನ ಶಕ್ತಿಯಿಂದ ನಾನು ನಿನ್ನೊಡನೆ ಸಾಮರ್ಥ್ಯಕ್ಕಾಗಿ ಪ್ರಾರ್ಥಿಸುತ್ತೇನೆ. ನಿನ್ನ ಮಹತ್ತರ ಔದಾರ್ಯದಿಂದ ನಾನು ನಿನ್ನೊಡನೆ ಬೇಡುತ್ತೇನೆ. ನಿಶ್ಚಯವಾಗಿಯೂ ನೀನು ಸಾಮರ್ಥ್ಯವುಳ್ಳವನಾಗಿರುವೆ. ನನಗಾದರೋ ಯಾವ ಸಾಮರ್ಥ್ಯವೂ ಇಲ್ಲ. ನೀನು ತಿಳಿದಿರುವೆ, ನಾನು ತಿಳಿದಿಲ್ಲ. ನೀನು ಎಲ್ಲಾ ಅಗೋಚರಗಳನ್ನು ತಿಳಿದವನು. ಅಲ್ಲಾಹ್, ಈ ಕಾರ್ಯವು ನನ್ನ ಧಾರ್ಮಿಕ ವಿಷಯದಲ್ಲಿ, ನನ್ನ ಜೀವನದ ವಿಷಯದಲ್ಲಿ ಮತ್ತು ನನ್ನ ವಿಷಯದ ಅವಸಾನದಲ್ಲಿ ನನಗೆ ಹಿತಕರವೆಂದು ನೀನು ತಿಳಿದಿದ್ದರೆ ಅದನ್ನು ನನಗೆ ನೀನು ನಿಶ್ಚಯಿಸಿ ಕೊಡು, ಅದನ್ನು ನನಗೆ ಸುಗಮಗೊಳಿಸು, ಆ ಮೇಲೆ ಅದರಲ್ಲಿ ನನಗೆ ಅಭಿವೃದ್ಧಿಯುಂಟು ಮಾಡು. ಈ ಕಾರ್ಯವು ನನ್ನ ಧಾರ್ಮಿಕ ವಿಷಯದಲ್ಲಿ, ನನ್ನ ಜೀವನದ ವಿಷಯದಲ್ಲಿ ಮತ್ತು ನನ್ನ ವಿಷಯದ ಅವಸಾನದಲ್ಲಿ ನನಗದು ಹಾನಿಕರವೆಂದು ನೀನು ತಿಳಿದಿದ್ದರೆ ಅದನ್ನು ನನ್ನಿಂದ ತಿರುಗಿಸಿ ಬಿಡು. ಹಾಗಾಗುವ ಸ್ಥಿತಿಯಲ್ಲಿ ನನಗೆ ನೀನು ಒಳಿತನ್ನು ಕರುಣಿಸು ಮತ್ತು ನನ್ನನ್ನು ನೀನು ತೃಪ್ತನಾಗಿ ಮಾಡು. ಪ್ರವಾದಿ(ಸ)ರು ಹೇಳಿದರು: "ಪ್ರಾರ್ಥನೆಯಲ್ಲಿ 'ಈ ಕಾರ್ಯವು' ಎಂದು ಹೇಳುವಲ್ಲಿ ತನ್ನ ಅಗತ್ಯದ ವಿಷಯವನ್ನು ಎತ್ತಿ ಹೇಳಬೇಕು". (ಬುಖಾರಿ)

With Best Compliments From:
M/s. ALPHA MEDICALS
S.K. Complex, Near Unity Health Complex,
High Land, Mangalore - 575 002. Ph.: 4268800

# ಘಾತಿಹಾದ ತೀರದಲ್ಲಿ

(3ನೇ ಪುಟದಿಂದ)

ಶೋಧಿಸಿ ತೀರ್ಮಾನ ಮಾಡಲು ಪ್ರವಾದಿ(ಸ)ರೊಡನೆ ಅಪೇಕ್ಷಿಸಿದರು. ಪ್ರವಾದಿ(ಸ)ರು ಅವಳೊಂದಿಗೆ "ಅಲ್ಲಾಹು ಎಲ್ಲಿ" ಎಂದು ಕೇಳಿದರು. ಅವಳು ಆಕಾಶದತ್ತ ಬೆರಳು ತೋರಿಸಿದಳು. ಬಳಿಕ ನಾನು ಯಾರೆಂದು ಕೇಳಿದರು. ಅಲ್ಲಾಹನ ರಸೂಲ್ ಎಂದು ಆಕೆ ಉತ್ತರಿಸಿದಳು. ಆಕೆ ಸತ್ಯವಿಶ್ವಾಸಿನಿಯಾಗಿದ್ದಾಳೆಂದು ಪ್ರವಾದಿ(ಸ)ರು ತೀರ್ಪಿತ್ತರು. ಹಾಗೆ ಆ ಸಹಾಬಿ ಆಕೆಯನ್ನು ವಿಮೋಚಿಸಿದರು. ಇಮಾಮ್ ಮುಸ್ಲಿಮ್ ಈ ಹದೀಸನ್ನು ದಾಖಲಿಸಿದ್ದಾರೆ. ಈ ಹದೀಸನ್ನು ಅಹ್ಲುಸುನ್ನತ್‌ನವರು ನೇರವಾಗಿ ಸ್ವೀಕರಿಸಿದ್ದಾರೆ. ಅಂದರೆ ಅಲ್ಲಾಹು ಎಲ್ಲಿ ಎಂದು ಕೇಳುವುದರ ಕುರಿತು ಅವರು ಆಕ್ಷೇಪಿಸುವುದಿಲ್ಲ. ಅಲ್ಲಾಹು ಆಕಾಶದಲ್ಲಿದ್ದಾನೆಂದು ವಿಶ್ವಾಸವಿಡುವುದರಲ್ಲಿ ಯಾವುದೇ ದೋಷವನ್ನು ಅವರು ಕಾಣುವುದಿಲ್ಲ. ವಿಶುದ್ಧ ಕುರ್‌ಆನಿನಲ್ಲೂ ಸ್ವಹೀಹಾದ ಹದೀಸ್‌ಗಳಲ್ಲೂ ಅಲ್ಲಾಹನ ಕುರಿತು ಏನು ಹೇಳಲಾಗಿದೆಯೋ ಅದನ್ನು ಹಾಗೆಯೇ ಸ್ವೀಕರಿಸುವವರಿದ್ದಾರೆ ಅಹ್ಲುಸುನ್ನತ್. ಅವರು ಯಾವುದೇ ವ್ಯಾಖ್ಯಾನವನ್ನು ಮಾಡುವುದಿಲ್ಲ. ಅವರಿಗೆ ಸಿಕ್ಕಿದ್ದನ್ನು ಅದೇ ರೂಪದಲ್ಲಿ ದೃಢಪಡಿಸಲಿಕ್ಕಾಗಿ ಅಗತ್ಯ ಬಂದಾಗ ವಿವರಣೆ, ಸಮರ್ಥನೆ ನೀಡುತ್ತಾರೆ. ಆದ್ದರಿಂದ ಅಲ್ಲಾಹು ಆಕಾಶದಲ್ಲಿದ್ದಾನೆಂದು ವಿಶ್ವಾಸವಿಡುವುದು ಮತ್ತು ಆ ಅರ್ಥದಲ್ಲಿ ಸಂಜ್ಞೆ ಮಾಡುವುದು ಇವೆಲ್ಲಾ ಅಹ್ಲುಸುನ್ನತ್‌ನ ನಿಲುವಾಗಿದೆ. ಆದರೆ ನಮ್ಮ ಸುನ್ನಿ ಮುಸ್ಲಿಯಾರ್‌ಗಳು ಅಲ್ಲಾಹು ಎಲ್ಲಿದ್ದಾನೆಂದು ಕೇಳಕೂಡದೆಂದು ವಾದಿಸುತ್ತಾರೆ. ಆಕಾಶದಲ್ಲಿದ್ದಾನೆಂದು ಹೇಳಿದರೆ ಈಮಾನ್ ನಷ್ಟಗೊಂಡು ಕಾಫಿರಾದೀತೆಂದು ಹೇಳುತ್ತಾರೆ. ಹಾಗಾದರೆ ಮೇಲಿನ ಹದೀಸಿನಲ್ಲಿರುವಂತೆ ಪ್ರವಾದಿ(ಸ)ರು ಆ ಮಹಿಳೆಯೊಡನೆ ಕೇಳಿದುದರ ಬಗ್ಗೆ ಅವರು ಏನೆಂದು ಹೇಳುವರು? ಆ ಮಹಿಳೆ ಸತ್ಯ ವಿಶ್ವಾಸಿನಿಯಾಗಿದ್ದಾಳೆಂದು ತೀರ್ಮಾನಿಸಲು ಆಧಾರವಾದದ್ದು ಅಲ್ಲಾಹು ಆಕಾಶದಲ್ಲಿದ್ದಾನೆಂದು ಆಕೆ ಹೇಳಿದ್ದು. ಆಕೆಯ ಹೇಳಿಕಯಿಂದ ಪ್ರವಾದಿ(ಸ)ರು ತೃಪ್ತರಾದರು. ಇದು ಕುಫ್ರಿಯತ್ ಯೆಂದಾಗಿದೆ ಮುಸ್ಲಿಯಾರ್‌ಗಳ ವಾದ ಎಷ್ಟು ಗಂಭೀರವಾದ ಪಥಭ್ರಷ್ಟತೆಯೆಂದು ಊಹಿಸಿ ನೋಡಿ.

ನನ್ನ ಬಾಲ್ಯ ಕಾಲದಲ್ಲಿ ಇಂಗ್ಲೀಷ್ ಕಲಿಯುವುದು ಹರಾಮ್ ಎಂದು ಮುಸ್ಲಿಯಾರ್‌ಗಳು ಹೇಳುತ್ತಿದ್ದರು. ಅದಕ್ಕೆ ಅವರು ಹೇಳಿದ ಒಂದು ಕಾರಣವೇನೆಂದರೆ ಇಂಗ್ಲೀಷ್ ಪುಸ್ತಕದಲ್ಲಿ ಅಲ್ಲಾಹು ಆಕಾಶದಲ್ಲಿದ್ದಾನೆಂದಿದೆ ಎಂದಾಗಿದೆ. ನಾನು ಅದನ್ನು ನಂಬಿದ್ದೆ. ಆ ಜಾಹಿಲಿಯ್ಯತ್‌ನಿಂದ ಮುಕ್ತಿ ಸಿಕ್ಕಿದ ಬಳಿಕ ಕುರ್‌ಆನ್ ಓದಿದಾಗ ಸೂರಃ ಅಲ್ ಮುಲ್ಕ್‌ನಲ್ಲಿ 'ಮನ್ ಫಿಸ್ಸಮಾಇ" ಎಂದು ಎರಡು ಬಾರಿ ಇರುವುದನ್ನು ನಾನು ಗಮನಿಸಿದೆ. ಆ ಪದದ ಅರ್ಥ ಆಕಾಶದಲ್ಲಿರುವವನು ಎಂದಾಗಿದೆ. ಅದು ಅಲ್ಲಾಹನ ಕುರಿತಾಗಿದೆ. ಒಂದು ಇಂಗ್ಲೀಷ್ ಪುಸ್ತಕದಲ್ಲಿ ಅಲ್ಲಾಹು ಆಕಾಶದಲ್ಲಿದ್ದಾನೆಂದು ಬರೆದುದಕ್ಕಾಗಿ ಇಂಗ್ಲೀಷ್ ಭಾಷೆಯನ್ನೇ ಹರಾಮ್ ಮಾಡಿದ ಮುಸ್ಲಿಯಾರ್‌ಗಳು ಕುರ್‌ಆನ್ ಮತ್ತು ಅರಬಿ ಭಾಷೆಯನ್ನು ಕಲಿಯುವುದರ ಬಗ್ಗೆ ಏನು ಹೇಳಿಯಾರು? ವಾಸ್ತವದಲ್ಲಿ ಅಲ್ಲಾಹು ಆಕಾಶದಲ್ಲಿದ್ದಾನೆಂಬುದು ಪರಮ ಸತ್ಯವಾಗಿದೆ. ಅದು ಅಹ್ಲು ಸುನ್ನತ್‌ನ ವಿಶ್ವಾಸವಾಗಿದೆ. ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಮಾತ್ರವಲ್ಲ, ಪ್ರಕೃತಿಯಲ್ಲೂ ಅದಕ್ಕೆ ಆಧಾರವಿದೆ. ಮೂಕರು ಅಲ್ಲಾಹನನ್ನು ಉದ್ದೇಶಿಸಿ ಸಂಜ್ಞೆ ಮಾಡುವುದನ್ನು ನೀವು ನೋಡಿಲ್ಲವೇ? ಅವರು ತೋರು ಬೆರಳನ್ನು ಮೇಲಕ್ಕೆ ಎತ್ತಿ ತೋರಿಸುತ್ತಾರೆ. ಇದರಲ್ಲಿ ಎರಡು ವಿಷಯಗಳಿವೆ. ಒಂದು: ಅಲ್ಲಾಹು ಮೇಲಿದ್ದಾನೆ ಅಥವಾ ಆಕಾಶದಲ್ಲಿದ್ದಾನೆ ಎಂಬುದು. ಎರಡು: ಅಲ್ಲಾಹು ಏಕೈಕನು ಎಂಬುದು. ಈ ಎರಡು ವಿಷಯಗಳನ್ನು ಈ ಮೂಕರು ಎಲ್ಲಿಂದ ಕಲಿತರು, ಯಾರು ಕಲಿಸಿದರು? ಅದು ಜನ್ಮತಃ ಬಂದದ್ದಾಗಿದೆ, ಪ್ರಕೃತಿದತ್ತವಾಗಿದೆ. ಈ ಪ್ರಕೃತಿಯನ್ನು ಅಸ್ತವ್ಯಸ್ತಗೊಳಿಸಬಾರದೆಂದು ಅಲ್ಲಾಹು ಆಜ್ಞಾಪಿಸಿದ್ದಾನೆ.

ಸತ್ಯವಿಶ್ವಾಸಿಗಳಿಗೆ ಇನ್ನಷ್ಟು ಪುರಾವೆ ನೀಡುವ ಎರಡು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ.

ಒಂದು: ಸತ್ಯವಿಶ್ವಾಸಿಗಳು ಪ್ರಾರ್ಥಿಸುವಾಗ ಕೈ ಮೇಲೆತ್ತುತ್ತಾರೆ. ಮೇಲಿಂದ ಇಳಿದು ಬರುವ ಯಾವುದೋ ವಸ್ತುವನ್ನು ಸ್ವೀಕರಿಸಲಿಕ್ಕೆಂಬಂತೆ ಎರಡೂ ಕೈಗಳನ್ನು ಒಂದು ಪಾತ್ರೆಯ ಆಕಾರದಲ್ಲಿ ಜೋಡಿಸಿ ಬೇಡುತ್ತಾರೆ. ಇದರ ಕಾರಣವೇನೆಂದು ನಿರ್ಮಲ ಮನಸ್ಸಿನಿಂದ ಚಿಂತಿಸುವ ಯಾರಿಗೂ ಈ ಪ್ರಾರ್ಥನೆಯನ್ನು ಆಲಿಸಿ ನೆರವೇರಿಸಿ ಕೊಡುವ ಅನುಗ್ರಹದಾತನು ಮೇಲ್ಭಾಗದಲ್ಲಿದ್ದಾನೆಂದು ಅರ್ಥವಾದೀತು.

ಎರಡು: ಕರುಣಾಮಯನಾದ ಅಲ್ಲಾಹು ಪ್ರವಾದಿ ಮುಹಮ್ಮದ್(ಸ)ರನ್ನು ತನ್ನ ಮಹೋನ್ನತ ಸನ್ನಿಧಿಗೆ ಬರ ಮಾಡಿಸಿಕೊಂಡ ಮಿಅ್‌ರಾಜ್‌ನ ಘಟನೆ ಎಲ್ಲರಿಗೂ ತಿಳಿದಿದೆ. ಸಮಾಲೋಚನೆ ನಡೆಸಿದ ಬಗ್ಗೆ ಅಭಿಪ್ರಾಯ ವ್ಯತ್ಯಾಸವಿದೆ. ಇಬ್‌ನು ಅಬ್ಬಾಸ್(ರ)ರು ಹೇಳುವುದೇನೆಂದರೆ ಪ್ರವಾದಿಯವರು ಅಲ್ಲಾಹನನ್ನು ಕಂಡರು ಎಂದಾಗಿದೆ. ಆಯಿಶಾ(ರ)ರವರು ಹೇಳುವುದೇನೆಂದರೆ ಕಾಣಲಿಲ್ಲ ಎಂದಾಗಿದೆ. ಸಂಭಾಷಣೆ ನಡೆದಿದೆಯೆಂಬುದರಲ್ಲಿ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಮಿಅ್‌ರಾಜ್‌ನ ವಿಷಯ ಹೇಳುವಲ್ಲಿ ಪ್ರವಾದಿ(ಸ)ರನ್ನು ಆಕಾಶದತ್ತ ಕರೆದೊಯ್ಯಲಾಯಿತು ಎಂದು ಸ್ಪಷ್ಟಪಡಿಸಲಾಗಿದೆ. ಪ್ರವಾದಿ(ಸ)ರ ಪಯಣ ಶಾರೀರಿಕವಾಗಿತ್ತೆಂಬುದೇ ಸತ್ಯ. ಏನಿದ್ದರೂ ಈ ಘಟನೆಯಿಂದ ಅಲ್ಲಾಹು ಮೇಲ್ಭಾಗದಲ್ಲಿದ್ದಾನೆಂಬುದು ಸ್ಪಷ್ಟವಾಗುತ್ತದೆ.

(ಮುಂದುವರಿಯುವುದು)

# ಇಸ್ಲಾಮ್ ಸಾರ್ವತ್ರಿಕ ಧರ್ಮ

(7ನೇ ಪುಟದಿಂದ)

ಅಲ್ಲಾಹುವಾಗಿದ್ದಾನೆ. (ಅವನು) ಸಾಮ್ರಾಟನೂ ಪರಮಪರಿಶುದ್ಧನೂ ಪರಿಪೂರ್ಣನೂ ಆಶ್ರಯ ನೀಡುವವನೂ ಮೇಲ್ನೋಟ ನಿರ್ವಹಿಸುವವನೂ ಪ್ರತಾಪಶಾಲಿಯೂ ಪರಮಾಧಿಕಾರಿಯೂ ಮಹತ್ವವುಳ್ಳವನೂ ಆಗಿರುತ್ತಾನೆ. ಅವರು (ಅವನಿಗೆ) ಸಹಭಾಗಿಗಳನ್ನಾಗಿ ಮಾಡುವುದರಿಂದೆಲ್ಲಾ ಅಲ್ಲಾಹನು ಅದೆಷ್ಟೋ ಪರಿಶುದ್ಧನು. ಸೃಷ್ಟಿಕರ್ತನಾದ, ನಿರ್ಮಾಣ ಗೈಯ್ಯುವವನಾದ, ರೂಪ ಕೊಡುವವನಾದ ಅಲ್ಲಾಹನು ಅವನೇ, ಅವನಿಗೆ ಅತೀ ಉತ್ತಮವಾದ ನಾಮಗಳಿವೆ. ಭೂಮಿ-ಆಕಾಶಗಳಲ್ಲಿರುವವುಗಳು ಅವನ ಮಹತ್ವವನ್ನು ಪ್ರಶಂಸಿಸುತ್ತಿವೆ. ಮತ್ತು ಅವನು ಪ್ರತಾಪಿಯೂ ವಿವೇಕ ಪೂರ್ಣನೂ ಆಗಿರುತ್ತಾನೆ." (ಕುರ್‌ಆನ್ 59: 22, 23, 24)

"ಹೇಳಿರಿ: ಅಲ್ಲಾಹು, ಅವನು ಏಕೈಕನು. ಅವನು ಸರ್ವರಿಗೂ ಆಶ್ರಯದಾತ ನಾಗಿರುವ ಯಜಮಾನನಾಗಿರುತ್ತಾನೆ. ಅವನು (ಯಾರಿಗೂ) ಜನ್ಮ ನೀಡಿಲ್ಲ ಮತ್ತು ಅವನು (ಯಾರ ಸಂತಾನವಾಗಿ) ಜನಿಸಿಯೂ ಇಲ್ಲ. ಮತ್ತು ಅವನಿಗೆ ಸರಿಸಮಾನರಾಗಿ ಯಾರೂ ಇಲ್ಲ." (ಕುರ್‌ಆನ್ 112:1-4)

ಈ ಭೂಮಿಯಲ್ಲಿ ಜೀವಿಸುತ್ತಿರುವ ನಮಗಾಗಿ ಭೂಮಿಯನ್ನು ವಾಸ ಯೋಗ್ಯವಾಗಿ ಮಾಡಿಕೊಟ್ಟ, ಭೂಮಿಯಲ್ಲಿರುವುದನ್ನೆಲ್ಲಾ ನಮಗಾಗಿ ಸೃಷ್ಟಿಸಿಕೊಟ್ಟ ಅವನು ಅದೆಷ್ಟು ಕರುಣಾಮಯಿ. ಅವನು ಮಾನವನನ್ನು ಸುಂದರವಾದ ಆಕಾರದೊಂದಿಗೆ ಮತ್ತು ವಿಶೇಷ ಬುದ್ಧಿಯೊಂದಿಗೆ ಸೃಷ್ಟಿಸಿದನು. ಅವನು ಭೂಮಿಯಲ್ಲಿರುವ ಅತಿದೊಡ್ಡ ಪ್ರಾಣಿಗಳನ್ನೂ ಸಹ ಪಳಗಿಸಿ ಅವುಗಳನ್ನು ಉಪಯೋಗಿಸಿಕೊಳ್ಳಲು ಮಾನವನಿಗೆ ಶಕ್ತಿ ಹಾಗೂ ಧೈರ್ಯ ನೀಡಿದನು. ಆ ಮೂಲಕ ಮಾನವನು ಪ್ರಪಂಚದಲ್ಲಿ ದೇವನು ಸೃಷ್ಟಿಸಿದ ವಸ್ತುಗಳನ್ನು ಬಳಸಿ ಮನುಷ್ಯನಂತೆ ಕಾರ್ಯವೆಸಗುವ ಯಂತ್ರ ಮಾನವ, ಕಂಪ್ಯೂಟರ್, ಇಂಟರ್‌ನೆಟ್‌ಗಳನ್ನು ತಯಾರಿಸಿ ಅದ್ಭುತಗಳನ್ನು ಸೃಷ್ಟಿಸಿದನು. ಆದರೆ ಇನ್ನೊಂದೆಡೆ ಮಾನವನು ಸ್ವತಃ ತನ್ನನ್ನೇ ನಿಯಂತ್ರಿಸಲಾಗದಷ್ಟು ದುರ್ಬಲನೂ ಆಗಿದ್ದಾನೆ. ಅಲ್ಲಾಹನು ಹೇಳುವುದನ್ನು ನೋಡಿರಿ:

"ಓ ಮಾನವ, ನೀನು ದುರ್ಬಲನಾಗಿ ಸೃಷ್ಟಿಸಲ್ಪಟ್ಟವನಾಗಿರುವಿ" (ಕುರ್‌ಆನ್ 4:28)

ನಮ್ಮ ಲೆಕ್ಕಾಚಾರಗಳನ್ನೆಲ್ಲಾ ಬುಡಮೇಲು ಮಾಡುವ, ನಮ್ಮೆಲ್ಲಾ ಶಕ್ತಿ, ಸಾಮರ್ಥ್ಯಗಳನ್ನು ಮೀರಿಹೋಗುವ ಪ್ರಕೃತಿ ದುರಂತ, ಬರಗಾಲ, ರೋಗ, ಅನಾಹುತ ಇತ್ಯಾದಿಗಳು ಸಂಭವಿಸುವಾಗ ಅವನ ಮನಸ್ಸು ಭಯದಿಂದ ತತ್ತರಿಸಿ ಅವನು ದಿಗ್ಭ್ರಮೆಗೊಳ್ಳುತ್ತಾನೆ. ಇದಾವುದೂ ತನಗೆ ಬಾಧಿಸದಿರುತ್ತಿದ್ದರೆ ಅಥವಾ ತನಗಾದ ಸಂಕಷ್ಟದಿಂದ ತಾನು ರಕ್ಷಣೆ ಹೊಂದುತ್ತಿದ್ದರೆ ಅಥವಾ ತನ್ನ ನಿರೀಕ್ಷೆ ಹಾಗೂ ಬಯಕೆಗಳು ವಿಫಲಗೊಳ್ಳದಿರುತ್ತಿದ್ದರೆ ಎಂಬ ಅಸಹಾಯಕತೆಯ ಕೂಗು ಅವನ ಮನದಾಳದಿಂದ ಹೊರಹೊಮ್ಮುವುದು ಸ್ವಾಭಾವಿಕವಾಗಿದೆ. ಆ ಕೂಗು ತನ್ನನ್ನು ಸೃಷ್ಟಿಸಿ ಸಂರಕ್ಷಿಸುತ್ತಿರುವ ಆ ಮಹಾನ್ ಶಕ್ತಿಯ ಕಡೆಗೆ ಮಾತ್ರವಾಗಿರಬೇಕೆಂದು ಇಸ್ಲಾಮ್ ಹೇಳುತ್ತದೆ. ಆ ಶಕ್ತಿಯನ್ನು 'ನೈಜ ಆರಾಧ್ಯನು' ಎಂಬ ಅರ್ಥ ಬರುವ ಅರಬಿ ಪದವಾದ "ಅಲ್ಲಾಹು" ಎಂದು ಜಗದೊಡೆಯನು ತನ್ನ ವಚನಗಳಲ್ಲಿ ಪರಿಚಯಿಸುತ್ತಾನೆ.ಅಂತರಾಳದ ಕೂಗು, ಪ್ರಾರ್ಥನೆ, ಸಹಾಯಾರ್ಥನೆ, ಆರಾಧನೆ ಎಲ್ಲವೂ ಮೇಲೆ ತಿಳಿಸಿದ ಶಕ್ತಿಯ ಮುಂದೆ ಮಾತ್ರವೇ ಆಗಿರಬೇಕು ಎಂದು ಇಸ್ಲಾಮ್ ಕಲಿಸುತ್ತದೆ. ತನ್ನ ಒಳಹೊರಗಿನ ಎಲ್ಲವನ್ನೂ ತಿಳಿದವನಾದ ಸೃಷ್ಟಿಕರ್ತನಿಗೆ ಮಾತ್ರ ತನಗೆ ಸಹಾಯ ಮಾಡಲು ಸಾಧ್ಯ. ಉಳಿದವರೆಲ್ಲರೂ ಸಹಾಯ ಯಾಚಿಸುವ ಸೃಷ್ಟಿಗಳು. ಮನುಷ್ಯ ಮನಸ್ಸುಗಳಿಂದ ಹೊರ ಬರುವ ಕೂಗು(ಪ್ರಾರ್ಥನೆ)- ಅದುವೇ ಸೃಷ್ಟಿಕರ್ತನು ಸೃಷ್ಟಿಗಳಿಂದ ಬಯಸುವ ಅತೀ ದೊಡ್ಡ ಆರಾಧನೆ. ಅಲ್ಲಾಹನು ಹೇಳುತ್ತಾನೆ. "ನಾನು ಮಾನವರನ್ನು ಮತ್ತು ಜಿನ್‌ಗಳನ್ನು ಸೃಷ್ಟಿಸಿದ್ದು ನನ್ನನ್ನು ಮಾತ್ರ ಆರಾಧಿಸಲಿಕ್ಕಾಗಿದೆ. ಮತ್ತು ನಾನು ಅವರಿಂದ ಜೀವನಾಧಾರವನ್ನೇನೂ ಅಪೇಕ್ಷಿಸುವುದಿಲ್ಲ." (ಕುರ್‌ಆನ್ 51:56, 57)

ಆದರೆ ಇಂದು ಮಾನವನು ತನ್ನಂತೆ ಜನಿಸುವ, ಬೆಳೆಯುವ, ರೋಗಿಯಾಗುವ, ತನ್ನ ಮೇಲೆರಗುವ ಅನಾಹುತಗಳನ್ನು ತಡೆಯಲಾಗದ ಮಾನವರೊಂದಿಗೆ ಅಭಯ ಕೋರುತ್ತಿರುವುದನ್ನು ಕಾಣಬಹುದಾಗಿದೆ. ಇನ್ನು ಕೆಲವರು ಮೃತರ ಸಮಾಧಿಗಳಲ್ಲಿ ಅಭಯ ಕೋರುತ್ತಾರೆ! ಮತ್ತೆ ಕೆಲವರು ಕಲ್ಲು, ಮರ, ಗಿಡ, ವಿಷಜಂತು, ನದಿ, ಸೂರ್ಯ ಮತ್ತು ವಿಗ್ರಹಗಳನ್ನು ಆರಾಧಿಸುತ್ತಾರೆ. ಈ ಸಂಪ್ರದಾಯವು ಧರ್ಮಗಳು ಕಲಿಸಿದ ತತ್ವಗಳಲ್ಲಾಗಲಿ, ಸಂದೇಶವಾಹಕರು ತಂದ ಸಂದೇಶಗಳಲ್ಲಾಗಲಿ ಕಾಣಲು ಸಾಧ್ಯವಿಲ್ಲ. ಜಗತ್ತಿನಲ್ಲಿ ಅನೇಕ ಸಂದೇಶವಾಹಕರು ಗತಿಸಿ ಹೋಗಿದ್ದಾರೆ. ಅವರೆಲ್ಲರೂ ಬೋಧಿಸಿದ ಪ್ರಧಾನ ತತ್ವ ಏಕೈಕನಾದ ದೇವನನ್ನು ಮಾತ್ರ ಕರೆದು ಪ್ರಾರ್ಥಿಸಿರಿ, ಅವನೊಂದಿಗೆ ಯಾರನ್ನೂ ಯಾವುದನ್ನೂ ಭಾಗೀದಾರರಾಗಿ ಸೇರಿಸಬೇಡಿರಿ,ಅವನ ನಿಯಮಗಳನ್ನು ಮಾತ್ರ ಅನುಸರಿಸಿ,ಅವನ ಮುಂದೆ ಮಾತ್ರ ತಲೆಬಾಗಿರಿ, ಅವನನ್ನು ಮಾತ್ರ ಭಯಪಡಿರಿ ಮತ್ತು ಅವನಲ್ಲಿ ಮಾತ್ರ ಭರವಸೆಯಿಡಿರಿ ಎಂಬುದಾಗಿತ್ತು. ನೋಹ, ಅಬ್ರಹಾಮ್, ಮೋಸೆಸ್, ಯೇಸು, ಯಾಕೋಬ್ ಮುಂತಾದವರೆಲ್ಲಾ ದೇವನಿಂದ ನಿಯುಕ್ತರಾಗಿದ್ದ ಸಂದೇಶವಾಹಕರಾಗಿದ್ದಾರೆ. ಭಾರತದಲ್ಲೂ ಸಂದೇಶವಾಹಕರು ನಿಯೋಜಿಸಲ್ಪಟ್ಟಿರಬಹುದು. ಏಕೆಂದರೆ ಸಂದೇಶವಾಹಕರು ನಿಯೋಜಿಸಲ್ಪಡದೆ ಯಾವ ಸಮುದಾಯವೂ ಗತಿಸಿ ಹೋಗಿಲ್ಲ ಎಂದು ಕುರ್‌ಆನ್ ಸ್ಪಷ್ಟಪಡಿಸುತ್ತದೆ. ಆದರೆ ಮಾನವನ ಶತ್ರುವಾದ ಶೈತಾನನು ದೇವನಿಗೆ ಮಾತ್ರ ಅರ್ಪಿಸಬೇಕಾದ ಆರಾಧನೆಗಳನ್ನು ದೇವೇತರರ ಕಡೆಗೆ ತಿರುಗಿಸಿಬಿಡಲು ಮಾನವನನ್ನು ಪ್ರೇರೇಪಿಸುತ್ತಾನೆ. ಹೀಗೆ ದೇವನನ್ನು ಪೂಜಿಸಬೇಕಾದ ಮಾನವನು ಮಧ್ಯವರ್ತಿಗಳ ಮೂಲಕ ಬಹುದೇವಾರಾಧಕನಾಗಿ ಮಾರ್ಪಡುವಾಗಲೆಲ್ಲಾ ಜನರನ್ನು ದೇವನೆಡೆಗೆ ಮರಳಿಸಲು ದೇವನು ತನ್ನ ಪ್ರವಾದಿಗಳನ್ನು ನಿಯೋಜಿಸಿಕೊಂಡಿದ್ದನು. ಅವರಲ್ಲಿ ಕೊನೆಯವರಾದ ಪ್ರವಾದಿ ಮುಹಮ್ಮದ್ (ಸ)ರವರ ಮೂಲಕ ಎಲ್ಲಾ ಕಾಲ ಹಾಗೂ ಸಕಲ ಜನಸಮುದಾಯಕ್ಕಾಗಿ ಅವತೀರ್ಣಗೊಳಿಸಿದ ಗ್ರಂಥದಲ್ಲಿ ಅಲ್ಲಾಹನು ಹೀಗೆ ಹೇಳುತ್ತಾನೆ":

"ನಿಮ್ಮ ಬಳಿಯಿರುವುದನ್ನು (ಗ್ರಂಥವನ್ನು) ಸಮರ್ಥಿಸುತ್ತ ನಾನು ಅವತೀರ್ಣಗೊಳಿಸಿರುವುದರಲ್ಲಿ ವಿಶ್ವಾಸವಿಡಿರಿ, ಅದನ್ನು ನಿಷೇಧಿಸುವ ಮೊದಲಿಗರಲ್ಲಿ ನೀವಾಗಬೇಡಿರಿ, ನನ್ನ ಸೂಕ್ತಗಳಿಗೆ ನೀವು ತುಚ್ಛಬೆಲೆ ಪಡೆಯದಿರಿ ಮತ್ತು ನನ್ನನ್ನು ಮಾತ್ರ ಭಯಪಡಿರಿ." (ಕುರ್‌ಆನ್ 2:41)

ಆದ್ದರಿಂದಲೇ ಇಸ್ಲಾಮ್ ಪ್ರತಿಪಾದಿಸುವ ಅತೀ ಮುಖ್ಯ ತತ್ವ "ಜನರೇ ನಿಮ್ಮನ್ನೂ ನಿಮಗಿಂತ ಮುಂಚಿನವರನ್ನೂ ಸೃಷ್ಟಿಸಿದ ನಿಮ್ಮ ಪ್ರಭುವನ್ನು ನೀವು ಆರಾಧಿಸಿರಿ, ನೀವು ದೇವಭಯವುಳ್ಳವರಾಗಬಹುದು "(ಕುರ್‌ಆನ್ 2:21) ಎಂಬುದಾಗಿದೆ. ಇದುವೇ ಇಸ್ಲಾಮಿನ ತಳಹದಿ.ಇದನ್ನು ಅನುಸರಿಸಿರಿ. ಇದರ ಮೂಲಕ ಮಾತ್ರವೇ ಮಾನವ ಮೈತ್ರಿ ಮತ್ತು ಶಾಶ್ವತ ಮೋಕ್ಷ. ಜನರನ್ನು ಪರಸ್ಪರ ಶತ್ರುಗಳನ್ನಾಗಿ ಮಾಡುವ ಪುರೋಹಿತ ಮಧ್ಯವರ್ತಿಗಳಿಂದ ಮುಕ್ತಿ ಪಡೆಯಲು ಇದುವೇ ಏಕೈಕ ದಾರಿ. ಈ ತತ್ವವನ್ನು ಅಳವಡಿಸಿಕೊಂಡಾಗ ಜನರು ಶಾಂತಿ ಹಾಗೂ ನೆಮ್ಮದಿಯಿಂದ, ಪರಸ್ಪರ ಪ್ರೀತಿ ಹಾಗೂ ಸೌಹಾರ್ದದಿಂದ ಬದುಕುವ ಒಂದೇ ಸಮುದಾಯವಾಗಿ ಮಾರ್ಪಡುವರು. ಅಲ್ಲಾಹನು ಹೇಳುವುದನ್ನು ನೋಡಿರಿ:

" ನಿಮ್ಮ ಈ ಸಮುದಾಯವು ಒಂದೇ ಸಮುದಾಯವಾಗಿದೆ ಮತ್ತು ನಾನು ನಿಮ್ಮ ಪ್ರಭುವಾಗಿದ್ದೇನೆ. ಆದುದರಿಂದ ನೀವು ನನ್ನನ್ನು ಮಾತ್ರ ಆರಾಧಿಸಿರಿ" (ಕುರ್‌ಆನ್ 21:92)

ಆತ್ಮೀಯರೇ, ಇಸ್ಲಾಮ್ ನಮ್ಮ ನಿಮ್ಮೆಲ್ಲರ ಧರ್ಮವಾಗಿದೆ. ಮನು ಕುಲದ ಉದ್ಧಾರಕ್ಕಾಗಿ ಜಗದೊಡೆಯನ ಸತ್ಯಧರ್ಮದ ಪುನರುತ್ಥಾನಕ್ಕಾಗಿ ಜಗತ್ತಿನಲ್ಲಿ ನಿಯೋಜಿಸಲ್ಪಟ್ಟಿದ್ದ ಸಕಲ ಪ್ರವಾದಿಗಳು ಕಲಿಸಿದ ಧರ್ಮ ಇಸ್ಲಾಮ್ ಮಾತ್ರವಾಗಿದೆ. ಇಸ್ಲಾಮ್ ಪರಿಚಯಿಸುವ ದೇವನು ಅಖಿಲ ಪ್ರಪಂಚವನ್ನೂ ಅದರಲ್ಲಿರುವ ಸರ್ವಚರಾಚರಗಳನ್ನೂ ತಮ್ಮ ಸಹಿತ ಸಕಲ ಮಾನವರನ್ನೂ ಇತರ ಜೀವಿಗಳನ್ನೂ ಸೃಷ್ಟಿಸಿ ಪೋಷಿಸುತ್ತಿರುವ ಪ್ರಪಂಚಾತೀತನಾದ ಶಕ್ತಿಯಾಗಿದ್ದಾನೆ. ಇಸ್ಲಾಮಿನ ಮೂಲ ಪ್ರಮಾಣವಾದ, ದೇವಗ್ರಂಥಗಳ ಕೊನೆಯ ಆವೃತಿಯಾದ ಕುರ್‌ಆನ್ ಕೇವಲ ಮುಸ್ಲಿಮರ ಗ್ರಂಥವಲ್ಲ, ಅದು ಸಕಲ ಮಾನವರಿಗಾಗಿ ಸರ್ವೇಶ್ವರನಿಂದ ಅವತೀರ್ಣಗೊಂಡಿರುವ ಮಾರ್ಗದರ್ಶಕ ಗ್ರಂಥವಾಗಿದೆ. ಕುರ್‌ಆನ್ ಎಂಬ ಪದದ ಅರ್ಥ 'ಓದಲ್ಪಡಬೇಕಾದುದು' ಎಂದಾಗಿದೆ. ಆದ್ದರಿಂದ ಇಸ್ಲಾಮ್ ಮಾತ್ರವೇ ಶಾಶ್ವತ ಮೋಕ್ಷಮಾರ್ಗ. ಅಲ್ಲಾಹನ ವಚನವಾದ ಕುರ್‌ಆನಿನ ಮುನ್ನೆಚ್ಚರಿಕೆಯನ್ನು ಗಮನಿಸಿರಿ! "ಯಾರಾದರೂ ಇಸ್ಲಾಮ್‌ನ ಹೊರತಾದುದನ್ನು ಧರ್ಮವಾಗಿ ಇಷ್ಟಪಟ್ಟರೆ ಅದನ್ನು ಅವನಿಂದ ಎಂದಿಗೂ ಸ್ವೀಕರಿಸಲಾಗದು ಮತ್ತು ಅವನು ಪರಲೋಕದಲ್ಲಿ ನಷ್ಟಕ್ಕೀಡಾದವರಲ್ಲಾಗಿರುವನು." (ಕುರ್‌ಆನ್ 3:85) ಚಿಂತಿಸಿರಿ. ನಶ್ವರವಾದ ಲೌಕಿಕ ಜೀವನಕ್ಕಿಂತ ಅನಶ್ವರವಾದ ಪಾರತ್ರಿಕ ಜೀವನಕ್ಕೆ ಪ್ರಾಧಾನ್ಯತೆ ನೀಡಿರಿ. ಶಾಶ್ವತ ಮೋಕ್ಷವನ್ನು ಆಯ್ಕೆ ಮಾಡಿರಿ. ಅಲ್ಲಾಹನು ಅನುಗ್ರಹಿಸಲಿ. ●

## ಓದುಗರ ಗಮನಕ್ಕೆ

**ಪವಿತ್ರ ಸಂದೇಶ ಪತ್ರಿಕೆಗೆ ಚಂದಾದಾರರಾಗಲು, ಚಂದಾ ನವೀಕರಿಸಲು ಮತ್ತು ಪತ್ರಿಕೆ ಸರಿಯಾಗಿ ತಲುಪದಿದ್ದರೆ ಈ ಕೆಳಗಿನ ನಂಬರ್‌ನಲ್ಲಿ ಸಂಪರ್ಕಿಸಿರಿ:**

**9482946133**

## ಅಧ್ಯಾಯ - 3 ಅಲ್ ಇಮ್ರಾನ್

ಒಟ್ಟು ಸೂಕ್ತಗಳು: 200 | ಮುಹಮ್ಮದ್ ಅಮಾನಿ ಮೌಲವಿ | ಪ್ರಕಟಿತ ಸೂಕ್ತಗಳು: 6, 7, 8

6 هُوَ الَّذِىْ يُصَوِّرُكُمْ فِى الْاَرْحَامِ كَيْفَ يَشَآءُ ؕ لَآ اِلٰهَ اِلَّا هُوَ الْعَزِيْزُ الْحَكِيْمُ ۝٦

7 هُوَ الَّذِىْٓ اَنْزَلَ عَلَيْكَ الْكِتٰبَ مِنْهُ اٰيٰتٌ مُّحْكَمٰتٌ هُنَّ اُمُّ الْكِتٰبِ وَاُخَرُ مُتَشٰبِهٰتٌ ؕ فَاَمَّا الَّذِيْنَ فِىْ قُلُوْبِهِمْ زَيْغٌ فَيَتَّبِعُوْنَ مَا تَشَابَهَ مِنْهُ ابْتِغَآءَ الْفِتْنَةِ
وَابْتِغَآءَ تَاْوِيْلِهٖ ۚ وَمَا يَعْلَمُ تَاْوِيْلَهٗٓ اِلَّا اللّٰهُ ۘ وَالرّٰسِخُوْنَ فِى الْعِلْمِ يَقُوْلُوْنَ اٰمَنَّا بِهٖ ۙ كُلٌّ مِّنْ عِنْدِ رَبِّنَا ۚ وَمَا يَذَّكَّرُ اِلَّآ اُولُوا الْاَلْبَابِ ۝٧

8 رَبَّنَا لَا تُزِغْ قُلُوْبَنَا بَعْدَ اِذْ هَدَيْتَنَا وَهَبْ لَنَا مِنْ لَّدُنْكَ رَحْمَةً ۚ اِنَّكَ اَنْتَ الْوَهَّابُ ۝٨

| | | | | | |
|---|---|---|---|---|---|
| **6** | | | | | |
| ಯಾವ ಆರಾಧ್ಯನೂ ಇಲ್ಲ لَآ اِلٰهَ | ಅವನು ಹೇಗೆ ಇಚ್ಛಿಸುತ್ತಾನೋ (ಹಾಗೆ) كَيْفَ يَشَآءُ | ಗರ್ಭಾಶಯಗಳಲ್ಲಿ فِى الْاَرْحَامِ | ನಿಮ್ಮನ್ನು ರೂಪುಗೊಳಿಸುವವನು ಅವನೇ هُوَ الَّذِىْ يُصَوِّرُكُمْ | | |
| ವಿವೇಕ ಪೂರ್ಣನು الْحَكِيْمُ ಪ್ರತಾಪ ಶಾಲಿ الْعَزِيْزُ | ಅವನ ಹೊರತು اِلَّا | | | | |
| **7** | | | | | |
| ಖಚಿತವಾದ (ದೃಢವಾದ) مُّحْكَمٰتٌ | ಕೆಲವು ವಚನಗಳು اٰيٰتٌ | ಅದರಲ್ಲಿವೆ مِنْهُ | ಗ್ರಂಥವನ್ನು الْكِتٰبَ | ನಿನ್ನ ಮೇಲೆ ಅವತೀರ್ಣಗೊಳಿಸಿದವನು اَنْزَلَ عَلَيْكَ | ಅವನೇ هُوَ الَّذِىْٓ |
| ಆದರೆ ಯಾರು فَاَمَّا الَّذِيْنَ | ಪರಸ್ಪರ ಹೋಲಿಕೆಯಿರುವವು مُتَشٰبِهٰتٌ | ಬೇರೆ ಕೆಲವು (ವಚನಗಳು) ಇವೆ. وَاُخَرُ | ಗ್ರಂಥದ ಮೂಲವಾಗಿದೆ اُمُّ الْكِتٰبِ | ಅವು هُنَّ | |
| ಇಚ್ಛಿಸಿದ್ದರಿಂದ ابْتِغَآءَ | ಅವುಗಳ ಪೈಕಿ ಪರಸ್ಪರ ಹೋಲಿಕೆಯಿರುವುದರ مَا تَشَابَهَ مِنْهُ | ಅವರು ಹಿಂದೆ ಬೀಳುವರು فَيَتَّبِعُوْنَ | ವಕ್ರತೆ زَيْغٌ | ಅವರ ಹೃದಯಗಳಲ್ಲಿರುವ فِىْ قُلُوْبِهِمْ | |
| ಅಲ್ಲಾಹನ ಹೊರತು اِلَّا اللّٰهُ | ಅದರ ವ್ಯಾಖ್ಯಾನ تَاْوِيْلَهٗٓ | ತಿಳಿಯುವುದಿಲ್ಲ وَمَا يَعْلَمُ | ಅದರ ವ್ಯಾಖ್ಯಾನವನ್ನು تَاْوِيْلِهٖ | ಬಯಸುತ್ತ وَابْتِغَآءَ | ಗೊಂದಲವನ್ನು الْفِتْنَةِ |
| ನಮ್ಮ ಪ್ರಭುವಿನ ವತಿಯಿಂದಾಗಿದೆ مِّنْ عِنْدِ رَبِّنَا | ಎಲ್ಲವೂ كُلٌّ | ನಾವು ಅದರಲ್ಲಿ ವಿಶ್ವಾಸವಿಟ್ಟಿದ್ದೇವೆ اٰمَنَّا بِهٖ | ಅವರು ಹೇಳುವರು يَقُوْلُوْنَ | ಜ್ಞಾನದಲ್ಲಿ فِى الْعِلْمِ | ದೃಢವಾಗಿರುವವರು وَالرّٰسِخُوْنَ |
| | ಸದ್ಬುದ್ಧಿಯುಳ್ಳವರ ಹೊರತು اِلَّآ اُولُوا الْاَلْبَابِ | ಗ್ರಹಿಸುವುದಿಲ್ಲ وَمَا يَذَّكَّرُ | | | |
| **8** | | | | | |
| ಮತ್ತು ನೀನು ಪ್ರಧಾನ ಮಾಡು وَهَبْ لَنَا | ನೀನು ನಮ್ಮನ್ನು ಸನ್ಮಾರ್ಗದಲ್ಲಿ ಮಾಡಿದ ಬಳಿಕ بَعْدَ اِذْ هَدَيْتَنَا | ನಮ್ಮ ಹೃದಯಗಳನ್ನು قُلُوْبَنَا | ನಮ್ಮ ಪ್ರಭೂ, ನೀನು ತಪ್ಪಿಸಬೇಡ رَبَّنَا لَا تُزِغْ | | |
| | ಅತ್ಯಂತ (ಅನುಗ್ರಹ) ಪ್ರಧಾನ ಮಾಡುವವನು الْوَهَّابُ | ನಿಶ್ಚಯವಾಗಿಯೂ ನೀನೇ اِنَّكَ اَنْتَ | ಅನುಗ್ರಹ رَحْمَةً | ನಿನ್ನ ವತಿಯ مِنْ لَّدُنْكَ | |

6. ತಾನಿಚ್ಛಿಸುವ ಹಾಗೆ ನಿಮ್ಮನ್ನು ಗರ್ಭಾಶಯಗಳಲ್ಲಿ ರೂಪುಗೊಳಿಸುವವನು ಅವನೇ. ಅವನ ಹೊರತು ಆರಾ ಧ್ಯನೇ ಇಲ್ಲ. (ಅವನು) ವಿವೇಕಪೂರ್ಣನಾದ ಪ್ರತಾಪಶಾಲಿ ಯಾಗಿರುತ್ತಾನೆ.
7. (ಪ್ರವಾದಿಯವರೇ), ನಿಮ್ಮ ಮೇಲೆ ಗ್ರಂಥವನ್ನು ಅವತೀರ್ಣಗೊಳಿಸಿದವನು ಅವನೇ. ಅದರಲ್ಲಿ ಸುಸ್ಪಷ್ಟವೂ ಖಚಿತವೂ ಆದ ಕೆಲವು ವಚನಗಳಿವೆ. ಅವು ಗ್ರಂಥದ ಮೌಲಿಕ ಭಾಗವಾಗಿದೆ. ಮತ್ತು ಪರಸ್ಪರ ಹೋಲಿಕೆಯಿರುವ ಬೇರೆ ಕೆಲವು (ವಚನಗಳೂ ಅದರಲ್ಲಿ) ಇವೆ. ಹೃದಯ ಗಳಲ್ಲಿ ವಕ್ರತೆಯುಳ್ಳವರು ಗೊಂದಲವುಂಟು ಮಾಡಲಿಚ್ಛಿ ಸುವುದರಿಂದ ದುರ್ವ್ಯಾಖ್ಯಾನವನ್ನು ಬಯಸುತ್ತಾ ಅವುಗಳಲ್ಲಿ ಪರಸ್ಪರ ಹೋಲಿಕೆಯಿರುವವುಗಳ ಹಿಂದೆ ಬೀಳು ತ್ತಾರೆ. ಆದರೆ ಅದರ ವ್ಯಾಖ್ಯಾನವು (ಅರ್ಥ) ಅಲ್ಲಾಹನ ಹೊರತು (ಇನ್ನಾರಿಗೂ)ತಿಳಿದಿರುವುದಿಲ್ಲ. ಮತ್ತು ಜ್ಞಾನದಲ್ಲಿ ಸುಧೃಢವಾಗಿರುವವರು "ನಾವು ಇದರಲ್ಲಿ ವಿಶ್ವಾಸ ವಿರಿಸಿದ್ದೇವೆ, ಎಲ್ಲವೂ ನಮ್ಮ ಪ್ರಭುವಿನ ವತಿಯಿಂದಾಗಿದೆ" ಎನ್ನುತ್ತಾರೆ. ಸದ್ಬುದ್ಧಿಯುಳ್ಳವರ ಹೊರತು (ಬೇರಾರೂ) ಗ್ರಹಿಸುವುದಿಲ್ಲ.
8. (ಅವರು ಹೀಗೆ ಪ್ರಾರ್ಥಿಸುವರು) "ನಮ್ಮ ಪ್ರಭೂ, ನೀನು ನಮ್ಮನ್ನು ಸನ್ಮಾರ್ಗದಲ್ಲಿ ಮಾಡಿದ ನಂತರ ನಮ್ಮ ಹೃದಯಗಳನ್ನು ನೀನು (ಅದರಿಂದ) ತಪ್ಪಿಸಬೇಡ ಮತ್ತು ನೀನು ನಮಗೆ ನಿನ್ನ ಬಳಿಯ ಅನುಗ್ರಹ ಪ್ರದಾನ ಮಾಡು. ನಿಜವಾಗಿಯೂ ಅತ್ಯಂತ (ಅನುಗ್ರಹ) ಪ್ರದಾನ ಮಾಡು ವವನು ನೀನೇ.

## ದುರ್ಬಲ ಮತ್ತು ಕೃತಕ ಹದೀಸ್‌ಗಳು

(5ನೇ ಪುಟದಿಂದ)

ಈ ಹದೀಸ್‌ನ ಕುರಿತು ಸುನ್ನಿಗಳ ನೆಚ್ಚಿನ ವಿದ್ವಾಂಸ ಇಮಾಮ್ ಇಬ್ನು ಹಜರುಲ್ ಹೈತಮಿ ಹೇಳಿರುವ ವಿಚಾರ ಮಾರ್ಮಿಕ ವಾಗಿದೆ. "ಮುಂಡಾಸಿನ ಮಹತ್ವದ ಕುರಿತು ವರದಿಯಾಗಿರುವ ಪ್ರಸ್ತುತ ಹದೀಸ್ ಸ್ಥಿರ ಗೊಂಡಿಲ್ಲ. (ಫತಾವಲ್ ಕುಬ್ರಾ 1-170)

ತುರ್ಮುದ್ಸಿಯ ವ್ಯಾಖ್ಯಾನದಲ್ಲಿ ಶೈಖ್ ಮುಬಾರಕ್ ಪೂರಿ ಹೇಳುತ್ತಾರೆ: ಮುಂಡಾಸಿನ ಮಹತ್ವವನ್ನು ವಿವರಿಸುವ ಹದೀಸ್‌ಗಳ ಪೈಕಿ ಸಹೀಹ್ ಆದ ಒಂದೇ ಒಂದು ಹದೀಸನ್ನೂ ನಾನು ಕಂಡಿಲ್ಲ. ಈ ಸಂಬಂಧ ವರದಿಯಾ ಗಿರುವ ಸಕಲ ಹದೀಸ್‌ಗಳೂ ದುರ್ಬಲ ಅಥವಾ ಕೃತಕ ನಿರ್ಮಿತವಾಗುವುದು. (ತುಹ್ ಫತುಲ್ ಅಹ್‌ವದ್ಸಿಯ್ಯ್ 3-150)

ಇಲ್ಲಿ ಓದುಗರ ಗಮನಕ್ಕೆ ಒಂದು ಪ್ರತ್ಯೇಕ ವಿಚಾರವನ್ನು ತರಲಿಚ್ಛಿಸುತ್ತೇನೆ. ಅದೇ ನೆಂದರೆ ಈ ವರೆಗಿನ ನನ್ನ ವಿವರಣೆಗಳಿಂದ ಮುಂಡಾಸು ಧರಿಸುವುದು ತಪ್ಪು ಎಂದಾಗಲೀ, ಅನಿಸ್ಲಾಮಿಕ ಎಂದಾಗಲೀ ಖಂಡಿತವಾಗಿಯೂ ಯಾರೂ ಭಾವಿಸಬಾರದು. ಮುಂಡಾಸು, ಟೋಪಿ ಮುಂತಾದ ಶಿರವಸ್ತ್ರಗಳನ್ನು ನಮಾ ಝ್‌ನಲ್ಲೂ ನಮಾಝ್ ಅಲ್ಲದ ವೇಳೆ ಯಲ್ಲೂ ಧರಿಸುವುದು ಪ್ರತಿಫಲಾರ್ಹ ವಲ್ಲದಿದ್ದರೂ ಅನುವದನೀಯವೇ ಆಗಿದೆ.

ಶೈಖ್ ನಾಸಿರುದ್ದೀನ್ ಅಲ್ಬಾನಿ, ಇಬ್ನು ಬಾಝ್, ಕೆ.ಎಂ. ಮೌಲವಿ ಮುಂತಾದ ಸಲಫಿ ವಿದ್ವಾಂಸರೆಲ್ಲರೂ ಶಿರವಸ್ತ್ರ ಧರಿಸುವವ ರಾಗಿದ್ದಾರು ಎಂಬ ಸತ್ಯವನ್ನೂ ನಾನು ನಿರಾ ಕರಿಸಲಾರೆ. ಆದರೆ ದುರ್ಬಲ ಹದೀಸ್‌ಗಳ ಆಧಾರದಲ್ಲಿ ಶಿರವಸ್ತ್ರ ಧರಿಸುವುದಕ್ಕೆ ಮಹತ್ವವಿದೆ ಎಂಬ ವಿಶ್ವಾಸ ತಾಳುವುದು ಮಾತ್ರ ಆಕ್ಷೇಪಾರ್ಹವೆನಿಸುತ್ತದೆ. ಈ ಲೇಖನದಲ್ಲಿ ವಿವರಿಸಿದ್ದು ಅದನ್ನೇ. ●

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2012-2014
Licence to Post without prepayment.
WPP/SK/MNG-104/2012-2014
Posted at Head Post Office, Mangalore.
Posting Date: 13th & 28th of Every Month
**Publication Date: 10th & 25th of Every Month**



الحركة السلفية بجنوب كرناتكا (م)

'ಪ್ರಾರ್ಥನೆ, ಸಹಾಯಾರ್ಥನೆ ಅಲ್ಲಾಹನೊಂದಿಗೆ ಮಾತ್ರ' ಎಂಬ ಧ್ಯೇಯವಾಕ್ಯದಡಿ
ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್ ಹಮ್ಮಿಕೊಂಡಿರುವ ವರ್ಷಾವಧಿ ಅಭಿಯಾನದ ಅಂಗವಾಗಿ

# ದ್ವಿದಿನ ಸಲಫಿ ಸಮ್ಮೇಳನ

ದಿನಾಂಕ **25-1-2014ನೇ** ಶನಿವಾರ ಮತ್ತು **26-1-2014ನೇ** ಭಾನುವಾರ
ಸ್ಥಳ: ಅಡ್ಯಾರು-ಕಣ್ಣೂರು (ಮಂಗಳೂರು-ಬೆಂಗಳೂರು ರಾ.ಹೆ. ಬದಿ) ಮಂಗಳೂರು

ದಿನಾಂಕ: 25-1-2014ನೇ ಶನಿವಾರ
ಅಪರಾಹ್ನ ಗಂಟೆ 2ರಿಂದ ಸಂಜೆ ಗಂಟೆ 6ರ ವರೆಗೆ

## ಮಹಿಳಾ ಸಮಾವೇಶ

ಭಾಗವಹಿಸುವ ವಿದ್ವಾಂಸೆಯರು

ಖದೀಜಾ ಇಕ್ಬಾಲ್, ಕೇರಳ
ಉಮ್ಮು ಮೂನಾ, ಮಂಗಳೂರು
ರೈಹಾನಾ ಬಿಂತ್‌ಹಕೀಮ್, ಮಂಗಳೂರು
ಝುಬೈದಾ ಸ್ವಲಾಹಿಯ್ಯ, ಕೇರಳ ಮತ್ತು
ಸಿಸ್ಟರ್ ಅಮತುಲ್ ಮತೀನ್ ಹೈದರಾಬಾದ್

ದಿನಾಂಕ: 26-1-2014ನೇ ಭಾನುವಾರ
ಬೆಳಿಗ್ಗೆ ಗಂಟೆ 9ರಿಂದ ರಾತ್ರಿ ಗಂಟೆ 10ರ ವರೆಗೆ

## ಬಹಿರಂಗ ಅಧಿವೇಶನ

ಭಾಗವಹಿಸುವ ವಿದ್ವಾಂಸರು

ಮೌ| ಹಾಫಿಝ್ ಡಾ| ಫುರ್ಖಾನ್‌ಅಲಿ ಮೆಹರ್ಬಾನ್, ಮದನಿ (ಉತ್ತರ ಪ್ರದೇಶ)
ಮೌ| ಅಬ್ದುರ್ರಹೀಮ್‌ಖುರ್ರಂ ಜಾಮಈ, ಸೌದಿ ಅರೇಬಿಯ.
ಅಬ್ದುಲ್‌ಗಫ್ಫೂರ್‌ಜಾಮಈ, ಅಬ್ದುಲ್ ವಹ್ಹಾಬ್ ಜಾಮಈ,
ಟಿ.ಪಿ. ಅಬ್ದುಲ್ಲ ಕೋಯ ಮದನಿ, ಮೌ| ಅಬ್ದುಲ್ ರಹಿಮಾನ್ ಸಲಫಿ,
ಮೌ| ಹನೀಫ್ ಕಾಯಕ್ಕೋಡಿ, ಮೌ| ಅಹ್ಮದ್ ಅನಸ್
ಮೌ| ಪಿ.ಪಿ. ಅಬ್ದುಸ್ಸಲಾಂ ಮೋಂಜಂ, ಮೌ| ನಾಸೀರುದ್ದೀನ್ ರಹ್ಮಾನಿ,
ಮೌ|ಅಲಿ ಉಮರ್. ಎಂ.ಎಂ. ಅಕ್ಬರ್ ಮತ್ತು ಅಂತಾರಾಷ್ಟ್ರೀಯ ಇಸ್ಲಾಮಿ ದಾರ್ಶನಿಕ
ಬ್ರ| ಇಮ್ರಾನ್ ಹೈದರಾಬಾದ್

ಇನ್‌ಶಾ ಅಲ್ಲಾಹ್

ಸತ್ಯಾನ್ವೇಷಿಗಳಾದ ಎಲ್ಲಾ ಸಹೋದರ-ಸಹೋದರಿಯರಿಗೆ ಹೃದಯಂಗಮ ಸ್ವಾಗತ — ಸ್ವಾಗತ ಸಮಿತಿ, ಎಸ್.ಕೆ.ಎಸ್.ಎಂ. ಕೇಂದ್ರ ಸಮಿತಿ(ರಿ.), ಮಂಗಳೂರು

Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K.. D.T.P.: Sowmya Graphics, Mangalore. Editor: M.G. Muhammad